KA / BG-GPO / 2515 / WPP-47 / 2006-2008

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಫೆಬ್ರವರಿ ೯, ೨೦೦೬ (ಮಾಘ ೨೦, ಶಕ ವರ್ಷ ೧೯೨೭) | ಸಂಚಿಕೆ ೬ |
| --- | --- | --- |

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಪರಿಶಿಷ್ಟ ವರ್ಗಗಳ ನಿರುದ್ಯೋಗಿ ಅಭ್ಯರ್ಥಿಗಳಿಗೆ ಪೈಲೆಟ್ ತರಬೇತಿ ಕಾರ್ಯಕ್ರಮದ ಅನುಮೋದನೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಕಇ 47 ಎಸ್‌ಎಲ್‌ಪಿ 2005, ದಿನಾಂಕ: 28.05.2005.
2) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಸಂಖ್ಯೆ: ಪವಕನಿ:ಗಿಉಯೋ:ಸಿಆರ್.82: 2004-05, ದಿನಾಂಕ: 25.10.2005.
3) ದಿನಾಂಕ: 02.12.2005ರ ಅಧಿಕಾರಯುಕ್ತ ಸಮಿತಿಯ ನಡವಳಿಗಳು.

**ಪ್ರಸ್ತಾವನೆ:**

2005-06ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸರ್ಕಾರವು ಈ ಕೆಳಕಂಡಂತೆ ಘೋಷಿಸಿದೆ.

"ಬೆಂಗಳೂರಿನಲ್ಲಿರುವ ಸರ್ಕಾರಿ ವಿಮಾನ ಹಾರಾಟ ತರಬೇತಿ ಶಾಲೆಯು ಸಮಾಜ ಕಲ್ಯಾಣ ಇಲಾಖೆಯ ಸಹಯೋಗದೊಂದಿಗೆ ಪರಿಶಿಷ್ಟಜಾತಿ/ಪಂಗಡದ ವಿದ್ಯಾರ್ಥಿಗಳಿಗೆ ವಿಮಾನ ಹಾರಾಟ ತರಬೇತಿಯನ್ನು ನೀಡುವ ವಿನೂತನ ಯೋಜನೆಯನ್ನು ಪ್ರಾರಂಭಿಸಿದೆ. ಆರಂಭದಲ್ಲಿ ಹತ್ತು ಮಂದಿ ಪರಿಶಿಷ್ಟ ಜಾತಿ/ಪಂಗಡದ ವಿದ್ಯಾರ್ಥಿಗಳಿಗೆ ತರಬೇತಿ ನೀಡಲಾಗುವುದು. ಮುಂದಿನ ವರ್ಷಗಳಲ್ಲಿ ಹೆಚ್ಚು ಮಂದಿಗೆ ತರಬೇತಿ ನೀಡಲಾಗುವುದು."

ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ತಮ್ಮ ಏಕ ಕಡತದಲ್ಲಿ 2005-06ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿದ ಪ್ರಕಾರ 10 ನಿರುದ್ಯೋಗಿ ಪರಿಶಿಷ್ಟ ವರ್ಗಗಳ ಯುವಕರಿಗೆ ಏರ್‌ಕ್ರ್ಯಾಫ್ಟ್ ಪೈಲೆಟ್ ತರಬೇತಿ ಕಾರ್ಯಕ್ರಮಕ್ಕಾಗಿ upfront pooled funds ರೂ. 130.00 ಲಕ್ಷಗಳನ್ನು ಒದಗಿಸಲು ಕೋರಲಾಗಿತ್ತು. ಆದರೆ ಸರ್ಕಾರದ ಆದೇಶ ಸಂಖ್ಯೆ: ಸಕಇ 47 ಎಸ್‌ಎಲ್‌ಪಿ 2005 ದಿನಾಂಕ: 28.05.2005 ರಲ್ಲಿ ಕಾರ್ಯಕ್ರಮಕ್ಕೆ ಹಣ ಒದಗಿಸಿಲ್ಲವೆಂದು ತಿಳಿಸಿದ್ದಾರೆ. ಪ್ರಸ್ತುತ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಪರಿಶಿಷ್ಟ ವರ್ಗಗಳ ವಿದ್ಯಾರ್ಥಿ ನಿಲಯಗಳಿಗೆ ಆಹಾರ ವೆಚ್ಚಕ್ಕಾಗಿ ರೂ.70.00 ಲಕ್ಷಗಳನ್ನು ಒದಗಿಸಲಾಗಿದೆಯೆಂದು, ಇದರಲ್ಲಿ ಸುಮಾರು ರೂ.40.00 ಲಕ್ಷಗಳ ಹಣ ಉಳಿತಾಯವಾಗುತ್ತದೆಂದು ತಿಳಿಸಿ, ಈ ಉಳಿತಾಯದ ಹಣದಲ್ಲಿ ಮೂರು ಪರಿಶಿಷ್ಟ ವರ್ಗದ ನಿರುದ್ಯೋಗಿ ಅಭ್ಯರ್ಥಿಗಳಿಗೆ ಏರ್‌ಕ್ರ್ಯಾಫ್ಟ್ ಪೈಲೆಟ್ ತರಬೇತಿಯನ್ನು ನೀಡಲು ಸರ್ಕಾರದ ಆದೇಶವನ್ನು ಕೋರಿರುತ್ತಾರೆ. ಈ ತರಬೇತಿ ಕಾರ್ಯಕ್ರಮವು 18 ತಿಂಗಳಿದ್ದು, ಒಬ್ಬ ಅಭ್ಯರ್ಥಿಗೆ ಒಟ್ಟು ವೆಚ್ಚ ರೂ.13.00 ಲಕ್ಷಗಳಾಗುತ್ತದೆಂದು ತಿಳಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 411 ಪವಯೋ 2005, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2005**

ಸರ್ಕಾರವು ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಗಣಿಸಿ, 2005-06ನೇ ಸಾಲಿನಲ್ಲಿ ಪರಿಶಿಷ್ಟ ವರ್ಗಗಳ ನಿರುದ್ಯೋಗಿ ಮೂರು ಯುವಕರಿಗೆ ಏರ್‌ಕ್ರ್ಯಾಫ್ಟ್ ಪೈಲೆಟ್ ತರಬೇತಿಯನ್ನು ನೀಡಲು ಸರ್ಕಾರವು ತನ್ನ ಅನುಮೋದನೆಯನ್ನು ನೀಡಿದೆ. ಇದಕ್ಕೆ ತಗಲುವ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ: ಸಕಇ 47 ಎಸ್‌ಎಲ್‌ಪಿ 2005, ದಿನಾಂಕ: 28.05.2005 ರಲ್ಲಿ ಪರಿಶಿಷ್ಟ ವರ್ಗದ ನಿಲಯದ ವಿದ್ಯಾರ್ಥಿಗಳಿಗೆ ಭೋಜನಾ ವೆಚ್ಚದ ಪರಿಷ್ಕರಣೆ ವೆಚ್ಚಕ್ಕಾಗಿ ಒದಲಾಗಿರುವ ರೂ.70.00 ಲಕ್ಷಗಳಲ್ಲಿ ಉಂಟಾಗುವ ಉಳಿತಾಯದಲ್ಲಿ ಭರಿಸುವುದು. ಈ ಕಾರ್ಯಕ್ರಮವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದ ನಿಯಮಗಳ ಅನುಸಾರ ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ದಿನಾಂಕ: 02.12.2005 ರಂದು ಅಧಿಕಾರಯುಕ್ತ ಸಮಿತಿಯು ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪ್ರಾಣದೇವ**

ಪಿ.ಆರ್. 48 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ತಿದ್ದೋಲೆ ಸಂಖ್ಯೆ: ಅಪಜೀ 149 ಎಫ್‌ಡಿಪಿ 2003, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2005**

ಮರಗಳ ಮತ್ತಿತರ ಅರಣ್ಯ ಉತ್ಪನ್ನಗಳ ಮೇಲೆ ಟಂಕತನದ ತೆರುವಳಿ ದರಗಳನ್ನು (Revision of seigniorage rates) ಪರಿಷ್ಕರಿಸಿ ಹೊರಡಿಸಿದ ಸರ್ಕಾರದ ಆದೇಶ ಸಂಖ್ಯೆ: ಅಪಜೀ 149 ಎಫ್‌ಡಿಪಿ 2003, ದಿನಾಂಕ: 01.12.2005ರ, ಅನುಬಂಧದ ಪುಟ ಸಂಖ್ಯೆ: 13ರ ಕ್ರಮ ಸಂಖ್ಯೆ: 137(ಬಿ) ನಲ್ಲಿಯ ಕಲಂ 6 ರಲ್ಲಿ "ರೂ.500 ಕ್ಕೆ ಬದಲಾಗಿ ರೂ.150-00 ಎಂದು" ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 50 **ಕೆ.ವಿ. ಜಯಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಚಿಕ್ಕಮಗಳೂರು ಜಿಲ್ಲೆ ಮತ್ತು ಮೈಸೂರು ಜಿಲ್ಲೆಗಳಲ್ಲಿನ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:**
1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ರಸ್ತೆ ಶಾಖೆ:ಎಇ–7: ಚಿಕ್ಕಮಗಳೂರು: ಮೇಲ್ದರ್ಜೆ: 05–06, ದಿನಾಂಕ:21–11–05.
2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿಎಸ್: ಆರ್‌ಡಿಎಸ್:ಸಇಂ–:2005–06, ದಿನಾಂಕ:02–1–06.
3) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಶಾ:ಗ್ರಾರ:ಮೇ:ಬನ್ನೂರು: 05–06, ದಿನಾಂಕ:03–01–2006.

**ಪ್ರಸ್ತಾವನೆ:**

ಮೇಲೆ ಓದಲಾದ (1) (2) ಮತ್ತು (3) ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕು ಮತ್ತು ಮೈಸೂರು ಜಿಲ್ಲೆ ಕೆ.ಆರ್.ನಗರ ತಾಲ್ಲೂಕಿನ ಈ ಕೆಳಕಂಡ 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | **ಚಿಕ್ಕಮಗಳೂರು ಜಿಲ್ಲೆ : ಮೂಡಿಗೆರೆ ಮತ್ತು ಕೊಪ್ಪ ತಾಲ್ಲೂಕು**<br>1. ಹೊರನಾಡು–ಬಲಿಗೆ–ಮೆಣಸಿನಹಾಡ್ಯ–ಕೊಗ್ರೆ ರಸ್ತೆ. | 15.00 |
| 2 | **ಮೈಸೂರು ಜಿಲ್ಲೆ : ಕೆ.ಆರ್.ನಗರ ತಾಲ್ಲೂಕು:**<br>ಹಳ್ಳಿ ಮೈಸೂರು–ಸಾಲಿಗ್ರಾಮ–ಚುಂಚನಕಟ್ಟೆ ರಸ್ತೆಯಿಂದ ಚಿಕ್ಕನಾಯಕನಹಳ್ಳಿ ಮಾರ್ಗ ಸಾಲಿಗ್ರಾಮ ಬಳ್ಳೂರು ರಸ್ತೆ. | 2.50 |
| 3 | **ಟಿ. ನರಸೀಪುರ ತಾಲ್ಲೂಕು:–**<br>1. ಬಿ.ಎಂ.ರಸ್ತೆಯಿಂದ ಬೀಡನಹಳ್ಳಿ, ಹನುಮನಾಳು, ಮಾರಗೌಡನಹಳ್ಳಿ ಮಾರ್ಗವಾಗಿ ಸುಲ್ತಾನ ರಸ್ತೆಗೆ ಸೇರುವ ರಸ್ತೆ. | 9.00 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 100 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 4ನೇ ಜನವರಿ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ 3 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | **ಚಿಕ್ಕಮಗಳೂರು ಜಿಲ್ಲೆ : ಮೂಡಿಗೆರೆ ಮತ್ತು ಕೊಪ್ಪ ತಾಲ್ಲೂಕು**<br>ಹೊರನಾಡು–ಬಲಿಗೆ–ಮೆಣಸಿನಹಾಡ್ಯ–ಕೊಗ್ರೆ ರಸ್ತೆ. | 15.00 |
| 2 | **ಮೈಸೂರು ಜಿಲ್ಲೆ : ಕೆ.ಆರ್.ನಗರ ತಾಲ್ಲೂಕು:**<br>ಹಳ್ಳಿ ಮೈಸೂರು–ಸಾಲಿಗ್ರಾಮ–ಚುಂಚನಕಟ್ಟೆ ರಸ್ತೆಯಿಂದ ಚಿಕ್ಕನಾಯಕನಹಳ್ಳಿ ಮಾರ್ಗ ಸಾಲಿಗ್ರಾಮ ಬಳ್ಳೂರು ರಸ್ತೆ. | 2.50 |
| 3 | **ಟಿ. ನರಸೀಪುರ ತಾಲ್ಲೂಕು:–**<br>ಬಿ.ಎಂ.ರಸ್ತೆಯಿಂದ ಬೀಡನಹಳ್ಳಿ, ಹನುಮನಾಳು, ಮಾರಗೌಡನಹಳ್ಳಿ ಮಾರ್ಗವಾಗಿ ಸುಲ್ತಾನ ರಸ್ತೆಗೆ ಸೇರುವ ರಸ್ತೆ. | **9.00** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 112 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರ ತಾಲ್ಲೂಕಿಗೆ ಸೇರಿದ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿಎಸ್: ರಸ್ತೆಶಾಖೆ:ಎಇ1: ರಸ್ತೆ ಮೇಲ್ದರ್ಜೆ: 05–06, ದಿನಾಂಕ:31-12–05

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆ ರಾಮನಗರ ತಾಲ್ಲೂಕಿನ ಈ ಕೆಳಕಂಡ 7 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಬಾನಂದೂರುನಿಂದ–ಭೈರವನದೊಡ್ಡಿ ಸೇರುವ ರಸ್ತೆ. | 3.00 |
| 2 | ಎಂ.ಗೋಪಹಳ್ಳಿಯಿಂದ–ಕಂಚುಗಾರನಹಳ್ಳಿ ಸೇರುವ ರಸ್ತೆ ಮಾರ್ಗ ತಾಯಪ್ಪನದೊಡ್ಡಿ | 4.00 |
| 3 | ಕೃಷ್ಣಾಪುರದ ದೊಡ್ಡಿಯಿಂದ ಅಂಕನಹಳ್ಳಿ ಮಾರ್ಗ ಕವಣಾಪುರ ಸೇರುವ ರಸ್ತೆ. | 6.00 |
| 4 | ಕೂಟಗಲ್ ಎರಹಳ್ಳಿಯಿಂದ ಜೋಗರದೊಡ್ಡಿ ತಿಮ್ಮಸಂದ್ರ ಮಾರ್ಗ ಟಿ.ಎನ್.ಎ.ಪಿ. ಸೇರುವ ರಸ್ತೆ. | 6.00 |
| 5 | ಮಂಚನಾಯಕಹಳ್ಳಿ ಬಿ.ಎಂ.ರಸ್ತೆಯಿಂದ ಬನ್ನಿಕಪ್ಪೆ ಸೇರುವ ರಸ್ತೆ ವಯಾ ಜಡೇನಹಳ್ಳಿ | 4.00 |
| 6 | ರಾಮನಗರ ಜಾಲಮಂಗಲ ರಸ್ತೆಯಿಂದ ಕ್ಯಾಸಾಪುರ ಮಾರ್ಗ ಕಣ್ವ ಸೇರುವ ರಸ್ತೆ. | 6.00 |
| 7 | ಬಿಡದಿ–ಮುದವಾಡಿ ರಸ್ತೆಯಿಂದ ಗೋಪಹಳ್ಳಿ–ಚೌಕಹಳ್ಳಿ ಮಾರ್ಗವಾಗಿ ಬೈರಮಂಗಲ ಸೇರುವ ರಸ್ತೆ | 6.00 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 100 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 4ನೇ ಜನವರಿ 2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ 7 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ಬಾನಂದೂರುನಿಂದ–ಭೈರವನದೊಡ್ಡಿ ಸೇರುವ ರಸ್ತೆ. | 3.00 |
| 2 | ಎಂ.ಗೋಪಹಳ್ಳಿಯಿಂದ–ಕಂಚುಗಾರನಹಳ್ಳಿ ಸೇರುವ ರಸ್ತೆ ಮಾರ್ಗ ತಾಯಪ್ಪನದೊಡ್ಡಿ | 4.00 |
| 3 | ಕೃಷ್ಣಾಪುರದ ದೊಡ್ಡಿಯಿಂದ ಅಂಕನಹಳ್ಳಿ ಮಾರ್ಗ ಕವಣಾಪುರ ಸೇರುವ ರಸ್ತೆ. | 6.00 |
| 4 | ಕೂಟಗಲ್ ಎರಹಳ್ಳಿಯಿಂದ ಜೋಗರದೊಡ್ಡಿ ತಿಮ್ಮಸಂದ್ರ ಮಾರ್ಗ ಟಿ.ಎನ್.ಎ.ಪಿ. ಸೇರುವ ರಸ್ತೆ. | 6.00 |
| 5 | ಮಂಚನಾಯಕಹಳ್ಳಿ ಬಿ.ಎಂ.ರಸ್ತೆಯಿಂದ ಬನ್ನಿಕಪ್ಪೆ ಸೇರುವ ರಸ್ತೆ ವಯಾ ಜಡೇನಹಳ್ಳಿ | 4.00 |
| 6 | ರಾಮನಗರ ಜಾಲಮಂಗಲ ರಸ್ತೆಯಿಂದ ಕ್ಯಾಸಾಪುರ ಮಾರ್ಗ ಕಣ್ವ ಸೇರುವ ರಸ್ತೆ. | 6.00 |
| 7 | ಬಿಡದಿ–ಮುದವಾಡಿ ರಸ್ತೆಯಿಂದ ಗೋಪಹಳ್ಳಿ–ಚೌಕಹಳ್ಳಿ ಮಾರ್ಗವಾಗಿ ಬೈರಮಂಗಲ ಸೇರುವ ರಸ್ತೆ | 6.00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 113 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. (ಸಂಪರ್ಕ)

**ವಿಷಯ:** ಹಾಸನ ಜಿಲ್ಲೆಯ ಸಕಲೇಶಪುರ ಮತ್ತು ಹೊಳೆನರಸೀಪುರ ತಾಲ್ಲೂಕಿನ ಸೇರಿದ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ಸಇಂ7:2004–05, ದಿನಾಂಕ:15-12–05

2) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಶಾ: ಸಇಂ7:2005–06, ದಿನಾಂಕ:26-12–05

**ಪ್ರಸ್ತಾವನೆ:**

ಮೇಲೆ ಓದಲಾದ (1) (2) ರ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಹಾಸನ ಜಿಲ್ಲೆ ಸಕಲೇಶಪುರ ಮತ್ತು ಹೊಳೆನರಸೀಪುರ ತಾಲ್ಲೂಕಿಗೆ ಸೇರಿದ ಈ ಕೆಳಕಂಡ 14 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ತುಂಬಾ ದುಸ್ಥಿತಿಯಲ್ಲಿದ್ದು ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದುದರಿಂದ ಈ ಗ್ರಾಮೀಣ ರಸ್ತೆಗಳನ್ನು ಸಾರ್ವಜನಿಕರ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| | **ಸಕಲೇಶಪುರ ತಾಲ್ಲೂಕು:** | |
| 1 | ಸಕಲೇಶಪುರ ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ–48ರ ಕಿಮೀ 216 ರಿಂದ ಗುಲಗಳಲೆ ಕೆಂದನಮನೆ ಎಸ್ಟೇಟ್ ಕೆಂದನಮನೆ ಗ್ರಾಮ, ಮೊಳಗೋಡು ಗ್ರಾಮದ ಮೂಲಕ ಬೆಳಗೋಡು ಸೇರುವ ರಸ್ತೆ | 5.40 |

| | | |
|---|---|---|
| | **ಹೊಳೆನರಸೀಪುರ ತಾಲ್ಲೂಕು:** | |
| 1 | ಮಾರನಾಯಕನಹಳ್ಳಿ–ಈಡಿಗನ ಹೊಸೂರು ರಸ್ತೆ. | 2.00 |
| 2 | ದೇವರಮುದ್ದನಹಳ್ಳಿ–ನಗರ್ತಿ ರಸ್ತೆ | 1.30 |
| 3 | ಶ್ರವಣೂರು–ನಗರ್ತಿ ಕೋಡಿಹಳ್ಳಿ ರಸ್ತೆ | 4.00 |
| 4 | ಹೊಳೆನರಸೀಪುರ–ಶ್ರವಣೂರು ರಸ್ತೆಯಿಂದ ಅರೇಹಳ್ಳಿ ರಸ್ತೆ. | 1.00 |
| 5 | ಹೊನಪುರ–ಶ್ರವಣೂರು ರಸ್ತೆಯಿಂದ ಬಂಟರತಳಾಲು ರಸ್ತೆ. | 1.10 |
| 6 | ಆಲದಹಳ್ಳಿ ದೇವರಮುದ್ದನಹಳ್ಳಿ ರಸ್ತೆ | 3.90 |
| 7 | ಕುಪ್ಪೆ ಬೇಡಿಗನಹಳ್ಳಿ ಕಾಳೇನಹಳ್ಳಿ ರಸ್ತೆ | 7.50 |
| 8 | ದಾಳಗೌಡನಹಳ್ಳಿ–ಜವರಿಕೊಪ್ಪಲು–ಹಳ್ಳಿಮೈಸೂರು ರಸ್ತೆ. | 3.20 |
| 9 | ಬಿ.ಟಿ. ರಸ್ತೆಯ ಕಿಮೀ 48.30 ರಿಂದ ಸಿ.ಹಿಂದಲಹಳ್ಳಿ ರಸ್ತೆ | 0.60 |
| 10 | ಮುಡಲಹಿಪ್ಪೆ –ದೊಡ್ಡಹಳ್ಳಿ ರಸ್ತೆಯಿಂದ ಮಲುಗನಹಳ್ಳಿ ರಸ್ತೆ. | 4.10 |
| 11 | ಉದ್ದೂರು–ಉದ್ದೂರು ಹೊಸಹಳ್ಳಿ–ಜೋಡಿಗುಬ್ಬಿ ರಸ್ತೆ. | 4.50 |
| 12 | ಮುಡಲಹಿಪ್ಪೆ–ದೊಡ್ಡಹಳ್ಳಿ ರಸ್ತೆಯಿಂದ ಹಿರಿತಳಾಲು–ದೊಡ್ಡಕಾಡನೂರು ರಸ್ತೆ. | 3.30 |
| 13 | ಅರಕಲಗೂಡು–ದೊಡ್ಡಹಳ್ಳಿ ರಸ್ತೆಯಿಂದ ಗಜ್ಜಿಗನಹಳ್ಳಿ–ಮೋಟನಾಯಕನಹಳ್ಳಿ ನಿಡುವಣಿ ರಸ್ತೆ. | 4.60 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 100 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 04–01–2006**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಕೆಳಕಂಡ 14 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| | **ಸಕಲೇಶಪುರ ತಾಲ್ಲೂಕು:** | |
| 1 | ಸಕಲೇಶಪುರ ತಾಲ್ಲೂಕಿನ ರಾಷ್ಟ್ರೀಯ ಹೆದ್ದಾರಿ–48ರ ಕಿಮೀ 216 ರಿಂದ ಗುಲಗಳಲೆ ಕೆಂದನಮನೆ ಎಸ್ಟೇಟ್ ಕೆಂದನಮನೆ ಗ್ರಾಮ, ಮೊಳಗೋಡು ಗ್ರಾಮದ ಮೂಲಕ ಬೆಳಗೋಡು ಸೇರುವ ರಸ್ತೆ | 5.40 |
| | **ಹೊಳೆನರಸೀಪುರ ತಾಲ್ಲೂಕು:** | |
| 1 | ಮಾರನಾಯಕನಹಳ್ಳಿ–ಈಡಿಗನ ಹೊಸೂರು ರಸ್ತೆ. | 2.00 |
| 2 | ದೇವರಮುದ್ದನಹಳ್ಳಿ – ನಗರ್ತಿ ರಸ್ತೆ | 1.30 |
| 3 | ಶ್ರವಣೂರು–ನಗರ್ತಿ ಕೋಡಿಹಳ್ಳಿ ರಸ್ತೆ | 4.00 |
| 4 | ಹೊಳೆನರಸೀಪುರ– ಶ್ರವಣೂರು ರಸ್ತೆಯಿಂದ ಅರೇಹಳ್ಳಿ ರಸ್ತೆ. | 1.00 |
| 5 | ಹೊನಪುರ–ಶ್ರವಣೂರು ರಸ್ತೆಯಿಂದ ಬಂಟರತಳಾಲು ರಸ್ತೆ. | 1.10 |
| 6 | ಆಲದಹಳ್ಳಿ ದೇವರಮುದ್ದನಹಳ್ಳಿ ರಸ್ತೆ | 3.90 |
| 7 | ಕುಪ್ಪೆ ಬೇಡಿಗನಹಳ್ಳಿ ಕಾಳೇನಹಳ್ಳಿ ರಸ್ತೆ | 7.50 |
| 8 | ದಾಳಗೌಡನಹಳ್ಳಿ–ಜವರಿಕೊಪ್ಪಲು–ಹಳ್ಳಿಮೈಸೂರು ರಸ್ತೆ. | 3.20 |
| 9 | ಬಿ.ಟಿ. ರಸ್ತೆಯ ಕಿಮೀ 48.30 ರಿಂದ ಸಿ.ಹಿಂದಲಹಳ್ಳಿ ರಸ್ತೆ | 0.60 |
| 10 | ಮುಡಲಹಿಪ್ಪೆ –ದೊಡ್ಡಹಳ್ಳಿ ರಸ್ತೆಯಿಂದ ಮಲುಗನಹಳ್ಳಿ ರಸ್ತೆ. | 4.10 |
| 11 | ಉದ್ದೂರು–ಉದ್ದೂರು ಹೊಸಹಳ್ಳಿ–ಜೋಡಿಗುಬ್ಬಿ ರಸ್ತೆ. | 4.50 |
| 12 | ಮುಡಲಹಿಪ್ಪೆ–ದೊಡ್ಡಹಳ್ಳಿ ರಸ್ತೆಯಿಂದ ಹಿರಿತಳಾಲು–ದೊಡ್ಡಕಾಡನೂರು ರಸ್ತೆ. | 3.30 |
| 13 | ಅರಕಲಗೂಡು–ದೊಡ್ಡಹಳ್ಳಿ ರಸ್ತೆಯಿಂದ ಗಜ್ಜಿಗನಹಳ್ಳಿ–ಮೋಟನಾಯಕನಹಳ್ಳಿ ನಿಡುವಣಿ ರಸ್ತೆ. | 4.60 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಪಿ.ಆರ್. 114 ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. (ಸಂಪರ್ಕ)

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ:** ಪಶುಪಾಲನಾ ಇಲಾಖೆಯಲ್ಲಿ ಪ್ರಸಕ್ತ ಸಾಲಿನಲ್ಲಿ 147 ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಅವಶ್ಯಕ ಸಿಬ್ಬಂದಿಯೊಂದಿಗೆ ಮೇಲ್ದರ್ಜೆಗೇರಿಸುವ ಕುರಿತು – ಆದೇಶ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ:ಪಸಂಮೀ 111 ಪಸಸೆ 1999 ದಿನಾಂಕ: 20-11-2000.
2) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 111 ಪಸಸೆ 1999 ದಿನಾಂಕ: 31-03-2001.
3) ಸರ್ಕಾರದ ಆದೇಶ ಸಂಖ್ಯೆ:ಪಸಂಮೀ 150 ಪಸಸೆ 2001 ದಿನಾಂಕ: 06-03-2002.
4) ಸರ್ಕಾರದ ಆದೇಶ ಸಂಖ್ಯೆ:ಪಸಂಮೀ 403 ಪಸಸೆ 2002 ದಿನಾಂಕ: 25-03-2003.
5) ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ:ನಿಪಸಂ:ಡಿವಿಡಿ:3: ವಿವ-6:ಮೇಲ್ದರ್ಜೆಗೇರಿಸುವುದು:03-04 ದಿನಾಂಕ: 31-03-04.

**ಪ್ರಸ್ತಾವನೆ:-**

ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪಶುಪಾಲನಾ ಇಲಾಖೆಯಲ್ಲಿ ಹಾಲಿ ಇರುವ 747 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರಗಳನ್ನು ಹಂತ ಹಂತವಾಗಿ 4 ವರ್ಷಗಳಲ್ಲಿ ಅವಶ್ಯ ಸಿಬ್ಬಂದಿಯೊಂದಿಗೆ ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು

ಆದೇಶಿಸಲಾಗಿದೆ. ಅದರಂತೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2000-2001ನೇ ಸಾಲಿನಲ್ಲಿ 200 ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳನ್ನು ಅಗತ್ಯ ಸಿಬ್ಬಂದಿಯೊಂದಿಗೆ ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ. ತದನಂತರ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2001-2002ನೇ ಸಾಲಿನಲ್ಲಿ 200 ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳನ್ನು ಅಗತ್ಯ ಸಿಬ್ಬಂದಿಯೊಂದಿಗೆ ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ. ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2002-2003ನೇ ಸಾಲಿನಲ್ಲಿ 200 ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳನ್ನು ಅಗತ್ಯ ಸಿಬ್ಬಂದಿಯೊಂದಿಗೆ ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ. ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ರವರು ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ ಪ್ರಸಕ್ತ ಸಾಲಿನಲ್ಲಿ 147 ಪ್ರಾಥಮಿಕ ಪಶು ಚಿಕಿತ್ಸಾಲಯಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲು ಹಾಗೂ ಅಗತ್ಯ ಸಿಬ್ಬಂದಿಯನ್ನು ಸೃಷ್ಟಿಸಲು (ಅಂದರೆ 147 ಪಶುವೈದ್ಯಾಧಿಕಾರಿಗಳು ಮತ್ತು 147 'ಡಿ' ದರ್ಜೆ ನೌಕರರ ಹುದ್ದೆಗಳು) ಸರ್ಕಾರದ ಅದೇಶವನ್ನು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತ್ತು, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆಃ ಪಸಂಮೀ 61 ಪಸಸೆ 2004 ಬೆಂಗಳೂರು ದಿನಾಂಕಃ 28ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಪಶುಪಾಲನಾ ಇಲಾಖೆಯಲ್ಲಿ ಪ್ರಸಕ್ತ ಸಾಲಿನಲ್ಲಿ 147 ಪ್ರಾಥಮಿಕ ಪಶು ಚಿಕಿತ್ಸಾಲಯಗಳನ್ನು ಈ ಆದೇಶಕ್ಕೆ ಲಗತ್ತಿಸಲಾದ ಅನುಬಂಧದಲ್ಲಿ ಸ್ಥಳಗಳನ್ನು ಗುರುತಿಸಿರುವಂತೆ ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದೆ ಹಾಗೂ ಮೇಲ್ದರ್ಜೆಗೇರಿಸಲಾದ 147 ಪಶುಚಿಕಿತ್ಸಾಲಯಗಳಿಗೆ, 147 ಪಶುವೈದ್ಯಾಧಿಕಾರಿಗಳ ಹುದ್ದೆಗಳು (ವೇತನ ಶ್ರೇಣಿ ರೂ. 6300-11840) ಮತ್ತು 147 'ಡಿ' ದರ್ಜೆ ನೌಕರರ ಹುದ್ದೆಗಳು (ವೇತನ ಶ್ರೇಣಿ ರೂ. 2500-3800) ಸೃಜಿಸಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶನಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮೊಹಮ್ಮದ್ ಅಬ್ದುಲ್ ಖದೀರ್**
ಪೀಠಾಧಿಕಾರಿ-2(ಪ್ರ)
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆಃ ಪಸಂಮೀ 61 ಪಸಸೆ 2004 ದಿನಾಂಕಃ 28.12-2005 ಕ್ಕೆ ಅನುಬಂಧ**

ಪ್ರಸಕ್ತ ಸಾಲಿನಲ್ಲಿ 147 ಪ್ರಾಥಮಿಕ ಪಶು ಚಿಕಿತ್ಸಾ ಕೇಂದ್ರಗಳನ್ನು ಪಶು ಚಿಕಿತ್ಸಾಲಯಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

| | ಜಿಲ್ಲೆ | | ತಾಲ್ಲೂಕು | | ಮೇಲ್ದರ್ಜೆಗೇರಿಸಿದ ಸಂಸ್ಥೆ ಹೆಸರು |
|---|---|---|---|---|---|
| | | | ಬೆಂಗಳೂರು ವಿಭಾಗ | | |
| 1 | ಬೆಂಗಳೂರು ನಗರ ಜಿಲ್ಲೆ | | ಬೆಂಗಳೂರು ಉತ್ತರ | 1 | ಮಾಕಳಿ |
| 2 | ಬೆಂಗಳೂರು ಗ್ರಾ ಜಿಲ್ಲೆ | | ಹೊಸಕೋಟೆ | 2 | ಶಿವನಾಪುರ |
| | | | ಮಾಗಡಿ | 3 | ಅಜ್ಜನಹಳ್ಳಿ |
| | | | ಕನಕಪುರ | 4 | ಉದಾರಹಳ್ಳಿ |
| | | | | 5 | ಹುಣಸನಹಳ್ಳಿ |
| | | | | 6 | ಚೀಲೂರು |
| | | | | 7 | ತಟ್ಟೇಕೆರೆ |
| | | | | 8 | ಕೊಳ್ಳಿಗಾನಹಳ್ಳಿ |
| | | | ರಾಮನಗರ | 09 | ಜಾಲಮಂಗಲ |
| | | | | 10 | ಸುಗ್ಗನಹಳ್ಳಿ |
| 3 | ಚಿತ್ರದುರ್ಗ | | ಹಿರಿಯೂರು | 11 | ಯಲ್ಲದಕೆರೆ |
| | | | | 12 | ಜವನಗೊಂಡನಹಳ್ಳಿ |
| | | | ಚಿತ್ರದುರ್ಗ | 13 | ಪಂಡರಹಳ್ಳಿ |
| | | | ಹೊಳಲ್ಕೆರೆ | 14 | ಚಿಕ್ಕಜಾಜೂರು |
| 4 | ದಾವಣಗೆರೆ | | ಚೆನ್ನಗಿರಿ | 15 | ದೇವರಹಳ್ಳಿ |
| | | | ಹರಿಹರ | 16 | ಬೆಳ್ಳೂಡಿ |
| 5 | ಕೋಲಾರ | | ಮುಳುಬಾಗಿಲು | 17 | ತಾಯಲೂರು |
| | | | | 18 | ಮಲ್ಲನಾಯಕನಹಳ್ಳಿ |
| | | | ಶ್ರೀನಿವಾಸಪುರ | 19 | ಪಾತಪಲ್ಲಿ |
| | | | ಕೋಲಾರ | 20 | ನಾಗನಾಳ |
| | | | ಶಿಡ್ಲಘಟ್ಟ | 21 | ಸಾದಲಿ |
| 6 | ಶಿವಮೊಗ್ಗ | | ಭದ್ರಾವತಿ | 22 | ದಡಮಘಟ್ಟ |
| | | | ಶಿಕಾರಿಪುರ | 23 | ತೊಗರ್ಸಿ |
| | | | | 24 | ಸಾಲೂರು |
| | | | ಸೊರಬ | 25 | ಎಣ್ಣೇಕೊಪ್ಪ |
| 7 | ತುಮಕೂರು | | ಕೊರಟಗೆರೆ | 26 | ವಡ್ಡಗೆರೆ |

| | ಜಿಲ್ಲೆ | | ತಾಲ್ಲೂಕು | | ಮೇಲ್ದರ್ಜೆಗೇರಿಸಿದ ಸಂಸ್ಥೆ ಹೆಸರು |
|---|---|---|---|---|---|
| | | | ತುರುವೇಕೆರೆ | 27 | ಅಂಚೀಹಳ್ಳಿ |
| | | | ಮಧುಗಿರಿ | 28 | ಶ್ರಾವಂಡನಹಳ್ಳಿ |
| | | | | 29 | ಕಾರ್ವೇನಹಳ್ಳಿ |
| | | | ಶಿರಾ | 30 | ಕೊಟ್ಟಿ |
| | | ಮೈಸೂರು ವಿಭಾಗ | | | |
| 8 | ಮೈಸೂರು | | ಪಿರಿಯಾಪಟ್ಟಣ | 31 | ಭುವನಹಳ್ಳಿ |
| | | | ನಂಜನಗೂಡು | 32 | ಕಳಲೆ |
| | | | ಮೈಸೂರು | 33 | ಇಟ್ಟಿಗೆಗೂಡು |
| 9 | ಚಾಮರಾಜನಗರ | | ಚಾಮರಾಜನಗರ | 34 | ಕಾಗಲವಾಡಿ |
| | | | | 35 | ದೇಮಹಳ್ಳಿ |
| | | | ಕೊಳ್ಳೇಗಾಲ | 36 | ಕಾಮಗೆರೆ |
| | | | ಗುಂಡ್ಲುಪೇಟೆ | 37 | ಹಾಲಹಳ್ಳಿ |
| | | | | 38 | ಬೊಮ್ಮಲಾಪುರ |
| 10 | ಚಿಕ್ಕಮಗಳೂರು | | ಚಿಕ್ಕಮಗಳೂರು | 39 | ಬೆಳವಾಡಿ |
| | | | ಕಡೂರು | 40 | ಹುಲಿಕೆರೆ |
| | | | | 41 | ಬಾಸೂರು |
| | | | | 42 | ಕೆ.ಬಿದರೆ |
| | | | ತರೀಕೆರೆ | 43 | ರಂಗೇನಹಳ್ಳಿ |
| 11 | ಹಾಸನ | | ಹಾಸನ | 44 | ಉಗನೆ |
| | | | ಹಾಸನ | 45 | ಕುದುರುಗುಂಡಿ |
| | | | ಅರಕಲಗುಡು | 46 | ಸಂತೆಮರೂರು |
| | | | ಅರಸೀಕೆರೆ | 47 | ಜೆ.ಸಿ.ಪುರ |
| | | | ಸಕಲೇಶಪುರ | 48 | ಹಾನುಬಾಳು |
| | | | ಆಲೂರು | 49 | ಕೆ.ಹೊಸಕೋಟೆ |
| 12 | ದಕ್ಷಿಣ ಕನ್ನಡ ಜಿಲ್ಲೆ | | ಸುಳ್ಯ | 50 | ಆರಂತೋಡಿ |
| 13 | ಉಡುಪಿ ಜಿಲ್ಲೆ | | ಉಡುಪಿ | 51 | ಪಡುಬಿದ್ರಿ |
| 14 | ಮಂಡ್ಯ | | ನಾಗಮಂಗಲ | 52 | ಬೋಗಾದಿ |
| | | | | 53 | ಭೀಮನಹಳ್ಳಿ |
| | | | ಶ್ರೀರಂಗಪಟ್ಟಣ | 54 | ನಗುವನಹಳ್ಳಿ |
| | | | | 55 | ಟಿ.ಎಂ.ಹೊಸೂರು |
| | | | ಮದ್ದೂರು | 56 | ದೊಡ್ಡಅರಸಿಕೆರೆ |
| | | | ಮಂಡ್ಯ | 57 | ಹೊಸಹಳ್ಳಿ |
| | | | ಮದ್ದೂರು | 58 | ಕೊಳಗೆರೆ |
| | | ಗುಲ್ಬರ್ಗಾ ವಿಭಾಗ | | | |
| 15 | ಗುಲ್ಬರ್ಗಾ | | ಜೇವರ್ಗಿ | 59 | ವಡಗೇರಾ |
| | | | | 60 | ಬಿರಾಳ |
| | | | | 61 | ಕಲ್ಲೂರು ಕೆ |
| | | | | 62 | ಅರಳಗುಂಡಿಗೆ |
| | | | ಅಫಜಲ್‌ಪುರ | 63 | ಕಲ್ಲೂರು |
| | | | | 64 | ಚೌಡಾಪುರ |
| | | | ಚಿತಾಪುರ | 65 | ಮಂಗಲಗಿ |
| | | | | 66 | ರೇವಗ್ಗಿ |
| | | | | 67 | ರಾವೂರ |
| | | | ಯಾದಗೀರ್ | 68 | ಚಿನ್ನಾಕಾರ |
| | | | | 69 | ಚವೇಟ್ನಾ |
| | | | | 70 | ಅಜಲಾಪೂರ |
| 16 | ರಾಯಚೂರು | | ದೇವದುರ್ಗ | 71 | ಗಾಣದಾಳ |
| | | | | 72 | ಕ್ಯಾದಿಗೇರಾ |
| | | | ಲಿಂಗಸೂಗುರು | 73 | ಮಟ್ಟೂರು |
| | | | | 74 | ಯರಡೋಣ |

| | ಜಿಲ್ಲೆ | | ತಾಲ್ಲೂಕು | | ಮೇಲ್ದರ್ಜೆಗೇರಿಸಿದ ಸಂಸ್ಥೆ ಹೆಸರು |
|---|---|---|---|---|---|
| 17 | ಬೀದರ್ | | ಔರಾದ್ | 75 | ಖೇರ್ಡಾ |
| | | | | 76 | ತೋರಣಾ |
| | | | | 77 | ದೂಪತ್‌ಮಹಾಗಾಂವ್ |
| | | | ಬಸವಕಲ್ಯಾಣ | 78 | ಬೇಲೂರ (ಕಿಟ್ಟಾ) |
| | | | | 79 | ಗಡಿಗೌಡಗಾಂವ್ |
| | | | ಭಾಲ್ಕಿ | 80 | ಜಾಂತಿ |
| | | | | 81 | ಲಖನಗಾಂವ್ |
| | | | ಬೀದರ್ | 82 | ಯಾಕತ್‌ಪುರ |
| | | | | 83 | ಗಾದಗಿ |
| | | | | 84 | ಬರೂರ |
| | | | ಹುಮನಾಬಾದ್ | 85 | ಮುಸ್ತರಿ |
| | | | | 86 | ಕರಕನಳ್ಳಿ |
| | | | | 87 | ಚಾಂಗಲೇರಾ |
| | | | | 88 | ಕನಕಟ್ಟಾ |
| | | | | 89 | ಸೇಡೋಳ |
| 18 | ಬಳ್ಳಾರಿ | | ಹಡಗಲಿ | 90 | ಹ್ಯಾರಡ |
| | | | | 91 | ಬೂದನೂರು |
| | | | | 92 | ಕತ್ತೆಬೆನ್ನೂರು |
| | | | | 93 | ಅಡವಿಮಲ್ಲನಕೇರಿ |
| | | | ಹಗರಿಬೊಮ್ಮನಹಳ್ಳಿ | 94 | ಹಂಪಾಪಟ್ಟಣ |
| | | | | 95 | ರಾಮನಗರ |
| | | | | 96 | ಬೆಣೆಕಲ್ |
| | | | ಕೂಡ್ಲಗಿ | 97 | ನರಸಿಂಹಗಿರಿ |
| | | | | 98 | ಆಲೂರು |
| 19 | ಕೊಪ್ಪಳ | | ಯಲಬುರ್ಗ | 99 | ಶಿರೂರ |
| | | | | 100 | ಬಳೋಟಗಿ |
| | | | | 101 | ತೊಂಡಿಹಾಳ |
| | | **ಬೆಳಗಾಂ ವಿಭಾಗ** | | | |
| 20 | ಬೆಳಗಾಂ | | ಸವದತ್ತಿ | 102 | ಕಗದಾಳ |
| | | | ಬೈಲಹೊಂಗಲ | 103 | ಮೂಗಬಸವ |
| | | | ಹುಕ್ಕೇರಿ | 104 | ಬಡಕುಂದ್ರಿ |
| | | | ಸಂಕೇಶ್ವರ | 105 | ಕುರಣಿ |
| | | | | 106 | ಕೇಸ್ತಿ |
| | | | ರಾಮದುರ್ಗ | 107 | ಮುದೇನೂರ |
| | | | ರಾಯಭಾಗ | 108 | ಪರಮಾನಂದವಾಡಿ |
| | | | ಅಥಣಿ | 109 | ಅನಂತಪುರ |
| | | | ಗೋಕಾಕ್ | 110 | ಬಳೋಬಾಳ |
| | | | | 111 | ಬೆಟಗೇರಿ |
| 21 | ಬಿಜಾಪುರ | | ಬಸವನಬಾಗೇವಾಡಿ | 112 | ಮುಳವಾಡ |
| | | | ಇಂಡಿ | 113 | ಬಳ್ಳೊಳ್ಳಿ |
| | | | | 114 | ಜಿಗಜಿವಣಗಿ |
| | | | | 115 | ಬರಡೋಲ |
| | | | ಬಿಜಾಪುರ | 116 | ಬಿಜ್ಜರಗಿ |
| | | | ಮುದ್ದೇಬಿಹಾಳ | 117 | ತುಂಬಗಿ |
| | | | | 118 | ರಕ್ಕಸಗಿ |
| 22 | ಉತ್ತರ ಕನ್ನಡ ಜಿಲ್ಲೆ | | ಕುಮಟಾ | 119 | ಮಿರ್ಜಾನಾ |
| | | | ಮುಂಡಗೋಡ | 120 | ಕಲಕೇರಿ |
| | | | ಹಳಿಯಾಳ | 121 | ಕಾಳಗಿನ ಕೊಪ್ಪ |
| | | | ಸಿದ್ದಾಪುರ | 122 | ಹೆಗ್ಗರಣೆ |
| | | | ಹೊನ್ನಾವರ | 123 | ಮೂಡ್ಕಣಿ |
| | | | ಯಲ್ಲಾಪುರ | 124 | ಉಮ್ಮಚಗಿ |

| | ಜಿಲ್ಲೆ | | ತಾಲ್ಲೂಕು | | ಮೇಲ್ದರ್ಜೆಗೇರಿಸಿದ ಸಂಸ್ಥೆ ಹೆಸರು |
|---|---|---|---|---|---|
| 23 | ಬಾಗಲಕೋಟೆ | | ಬಾದಾಮಿ | 125 | ಕೆಲವಡಿ |
| | | | ಬಾಗಲಕೋಟೆ | 126 | ಹಿರೇಮ್ಯಾಗೇರಿ |
| | | | ಬೀಳಗಿ | 127 | ಅರಕೇರಿ |
| | | | ಹುನಗುಂದ | 128 | ಕಂದಗಲ್ಲ |
| | | | ಜಮಖಂಡಿ | 129 | ಮುತ್ತೂರ |
| | | | ಮುಧೋಳ | 130 | ಇಂಗಳಗಿ ಯಡಹಳ್ಳಿ |
| 24 | ಧಾರವಾಡ | | ಧಾರವಾಡ | 131 | ನವಲೂರ |
| | | | ಕುಂದಗೋಳ | 132 | ಪಶುಪತಿಹಾಳ |
| | | | ಹುಬ್ಬಳ್ಳಿ | 133 | ಉಣಕಲ್ |
| | | | | 134 | ತಾರಿಹಾಳ |
| | | | ಕಲಘಟಗಿ | 135 | ಸುರಶೆಟ್ಟಿಕೊಪ್ಪ |
| | | | ನವಲಗುಂದ | 136 | ಶಿಶುವಿನಹಳ್ಳಿ |
| 25 | ಗದಗ | | ಮುಂಡರಗಿ | 137 | ಜಂತ್ಲಿ ಶಿರೂರ |
| | | | ಗದಗ | 138 | ಕಣಗಿನಹಾಳ |
| | | | | 139 | ತಿಮ್ಮಾಪುರ |
| | | | ನರಗುಂದ | 140 | ಜಗಾಪುರ |
| | | | ರೋಣ | 141 | ಹಿರೇಹಾಳ |
| | | | ಶಿರಹಟ್ಟಿ | 142 | ಬನ್ನಿಕೊಪ್ಪ |
| 26 | ಹಾವೇರಿ | | ಹಾನಗಲ್ಲ | 143 | ಕೊಪ್ಪರಶಿಕೊಪ್ಪ |
| | | | | 144 | ಹಸನಾಬಾದಿ |
| | | | ಹಿರೇಕೆರೂರು | 145 | ತಡಕನಹಳ್ಳಿ |
| | | | ರಾಣೆಬೆನ್ನೂರು | 146 | ಕುಪ್ಪೇಲೂರು |
| | | | ಸವಣೂರು | 147 | ಹತ್ತಿಮತ್ತೂರು |

**ಮೊಹಮ್ಮದ್ ಅಬ್ದುಲ್ ಖದೀರ್**

ಪಿ.ಆರ್. 135 ಪೀಠಾಧಿಕಾರಿ-2(ಪ್ರ) ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಆಶ್ರಯ ಯೋಜನೆಯಡಿ ಮನೆಗಳ ನಿರ್ಮಾಣದಲ್ಲಿ ಅವ್ಯವಹಾರ - ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಅಧೀಕ್ಷಕ ಅಭಿಯಂತರವರ ಕಛೇರಿ, ಪಂ.ರಾ.ಇಂ. ವೃತ್ತ, ಗುಲ್ಬರ್ಗಾ ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ- ಆದೇಶ.

**ಓದಲಾಗಿದೆ:**
1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ಮುಖ್ಯ ಅಭಿಯಂತರರು, ಪಂರಾಇಂ ಇಲಾಖೆ, ಬೆಂಗಳೂರು ಇವರಿಗೆ ಬರೆದು ಸರ್ಕಾರಕ್ಕೆ ಕಳುಹಿಸಿದ ಪತ್ರದ ಸಂಖ್ಯೆ.ಜಿಪಗು:ಆಡಳಿತ:ವಿಚಾರಣೆ:48:91-92, ದಿ. 20-12-2005.
2) ಮುಖ್ಯ ಇಂಜಿನಿಯರ್, ಪಂ.ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂ. ಮುಇಂ:ಪಂರಾಇಂಇ:ಬೆಂ:ಸಿ-7:ಸಇಂ:ಅವ್ಯವಹಾರ:2005-06:5972 ದಿ. 30-12-2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ. (1)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಇವರು ದಿ. 20-12-2005 ರ ಪತ್ರದಲ್ಲಿ ಶ್ರೀ ರವಿಸೂರನ್, ಸ.ಇಂ.(ಖಆರ್‌ಇ) ಇವರು ಈ ಕೆಳಕಂಡಂತೆ ಅವ್ಯವಹಾರ ಎಸಗಿರುತ್ತಾರೆಂದು ವರದಿ ಮಾಡಿರುವರು.

1. ಗದಲೇಗಾಂವ ಗ್ರಾಮಕ್ಕೆ ಆಶ್ರಯ ಯೋಜನೆಯಡಿ ಒಟ್ಟು 165 ಮನೆಗಳಿಗೆ ರಾಜೀವಗಾಂಧಿ ಗ್ರಾಮೀಣ ವಸತಿ ನಿಗಮ, ಬೆಂಗಳೂರು ರವರು ಅನುಮೋದಿಸಿದ್ದು, ಸಹಾಯಕ ನಿರ್ದೇಶಕರು, ನಗರ ಯೋಜನೆ ಇಲಾಖೆ, ಗುಲ್ಬರ್ಗಾರವರು ಸದರಿ ನಿವೇಶನಗಳ ನಕಾಶೆಗೆ ಒಪ್ಪಿಗೆ ನೀಡಿದ್ದು, ಒಪ್ಪಿಗೆ ನೀಡಿದ ನಕಾಶೆಯಲ್ಲಿ 140 ಮನೆಗಳ ನಿವೇಶನಗಳು ಮಾತ್ರ ತೋರಿಸಿರುತ್ತಾರೆ. ಇನ್ನೂಳಿದ 25 ಮನೆಗಳು ತೋರಿಸಿರುವುದಿಲ್ಲ. 140 ಜನಗಳಿಗೆ ಹಕ್ಕು ಪತ್ರ ನೀಡಿರುತ್ತಾರೆ.
2. ಸದರಿಯವರು, ಈ ಕೆಳಗಿನಂತೆ ಮುಂಗಡ ಹಣ ಪಡೆದುಕೊಂಡಿರುವರು.

   30 ಮನೆಗಳು : 1) ಚೆಕ್ ನಂ: 1015267, ದಿ. 27.11.03 - ರೂ. 3.60 ಲಕ್ಷ.
   2) ಚೆಕ್ ನಂ. 1015268, ದಿ. 27.11.03

   50 ಮನೆಗಳು :1) ಚೆಕ್ ನಂ. 1119619, ದಿ. 24.8.04 - ರೂ. 6.50 ಲಕ್ಷ
   2) ಚೆಕ್ ನಂ. 1119699, ದಿ. 25.10.05

   **ಒಟ್ಟು 80 ಮನೆಗಳು - ರೂ. 10.10 ಲಕ್ಷ**
3. ಮುಂಗಡ ಹಣದ ಪ್ರಕಾರ ತನಿಖೆ ಸಮಯದಲ್ಲಿ ಸದರಿ ಮನೆಗಳ ನಿರ್ಮಾಣಗಳ ಹಂತಗಳು ಈ ಕೆಳಗಿನಂತೆ ಇರುತ್ತವೆ. ಈ ಎಲ್ಲಾ ಮನೆಗಳು ಅಪೂರ್ಣವಿರುವುದು.

   1. ಲಿಂಟಲ ಮಟ್ಟ - 38
   2. ನೆಲ ಸಮದ್ದು - 10
   3. ಬುನಾದಿ - 12
   4. ತಗ್ಗು ತೊಡಿ ತುಂಬಲಾದ ಮನೆಗಳು - 24

4. ನಿರ್ಮಾಣದ ವಿವಿಧ ಹಂತದಲ್ಲಿರುವ ಈ ಮೇಲಿನ ಮನೆಗಳಲ್ಲಿ ಲಿಂಟಲ್ ಮಟ್ಟಕ್ಕೆ ಬಂದಿರುವ 38 ಮನೆಗಳಿಗೆ ಬಾಗಿಲು ಫ್ರೇಮ್ ಅಳವಡಿಸಿರುವುದಿಲ್ಲ. ಇದರಲ್ಲಿ ಒಂದು ಬ್ಲಾಕ್ ಮನೆಗಳ ಗೋಡೆ 90 ಡಿಗ್ರಿಯಲ್ಲಿರುವುದಿಲ್ಲ. ಪ್ರತಿಯೊಬ್ಬ ಫಲಾನುಭವಿಗಳಿಗೆ ಪ್ರತ್ಯೇಕವಾಗಿ ಮನೆಗಳು ನಿರ್ಮಾಣ ಮಾಡಿರುವುದಿಲ್ಲ. ಒಂದು ಬ್ಲಾಕಿನಲ್ಲಿ 4 ಫಲಾನುಭವಿಗಳಿಗೆ ಮನೆಗಳು ನಿರ್ಮಿಸಲಾಗಿದ್ದು, ಒಂದು ಗೋಡೆ ಉಳಿತಾಯವಾಗಿರುತ್ತದೆ. ಅಲ್ಲದೆ ಮನೆಗಳಿಗೆ ಕಿಟಕಿ ಇರುವುದಿಲ್ಲ. ಈ ರೀತಿ ಎಲ್ಲಾ ಮನೆಗಳ ಅಪೂರ್ಣ ಹಾಗೂ ಯಾವುದೇ ಮನೆಗಳು ಪೂರ್ತಿಗೊಳಿಸಿರುವುದಿಲ್ಲ.
5. ಕಳೆದ ಮೂರು ವರ್ಷದಿಂದ ಮನೆಗಳು ಕಟ್ಟಿರುವುದಿಲ್ಲ.

ಈ ಮೇಲಿನ ಎಲ್ಲಾ ಆರೋಪಗಳು ಗಂಭೀರವಾಗಿದ್ದು , ಹಣ ಅವ್ಯವಹಾರವಾದದ್ದು ಸ್ಪಷ್ಟವಾಗಿ ಕಂಡು ಬಂದ ಪ್ರಯುಕ್ತ ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್ (ಎಂಆರ್ಇ) ಇವರು ಈಗ, ಅಧೀಕ್ಷಕ ಅಭಿಯಂತರರ ಕಾರ್ಯಾಲಯ, ಪಂರಾಇಂ ವೃತ್ತ, ಗುಲ್ಬರ್ಗಾದಲ್ಲಿ ಕೆಲಸ ನಿರ್ವಹಿಸುತ್ತಿದ್ದ ಪ್ರಯುಕ್ತ ಇವರು ಜಿಲ್ಲಾ ಪಂಚಾಯತ್ , ಗುಲ್ಬರ್ಗಾ ಅಧೀನದಲ್ಲಿಲ್ಲದ ಪ್ರಯುಕ್ತ ತಕ್ಷಣದಿಂದ ಸದರಿ ಸಹಾಯಕ ಇಂಜಿನಿಯರ್‌ರನ್ನು ಅಮಾನತ್ತುಗೊಳಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ.(2) ರ ಪತ್ರ ದಿ. 30-12-2005 ರಲ್ಲಿ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ , ಬೆಂಗಳೂರು ಇವರು ಸರ್ಕಾರಕ್ಕೆ ವರದಿ ಮಾಡುತ್ತಾ , ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಹಾಲಿ ಅಧೀಕ್ಷಕ ಅಭಿಯಂತರರ ಕಛೇರಿ, ಪಂ.ರಾ.ಇಂ. ವೃತ್ತ, ಗುಲ್ಬರ್ಗಾ ಇವರು ಈ ಹಿಂದೆ ತಾಲ್ಲೂಕು ಪಂಚಾಯತ್, ಆಳಂದ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 2001-02ನೇ ಸಾಲಿನ ಆಶ್ರಯ ಯೋಜನೆಯಡಿ ಗದಲೇಗಾಂವ್ ಗ್ರಾಮದಲ್ಲಿ ಮನೆಗಳ ನಿರ್ಮಾಣ ಕಾಮಗಾರಿಯನ್ನು ವಹಿಸಿಕೊಂಡಿದ್ದು ಆದರೆ, ಸದರಿಯವರು ಯಾವುದೇ ಮನೆಗಳನ್ನು ಪೂರ್ಣ ಗೊಳಿಸದೇ ಅವ್ಯವಹಾರವೆಸಗಿದ್ದಾರೆಂದು ಮತ್ತು ಸರ್ಕಾರದ ಹಣವನ್ನು ದುರುಪಯೋಗ ಪಡಿಸಿಕೊಂಡಿರುವುದು ತನಿಖೆ ಮೂಲಕ ಮೇಲ್ನೋಟಕ್ಕೆ ಸಾಬೀತಾಗಿರುವ ಹಿನ್ನೆಲೆಯಲ್ಲಿ ಅವರನ್ನು ಕೂಡಲೇ ಅಮಾನತ್ತಿನಲ್ಲಿಡಲು ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಮುಖ್ಯ ಇಂಜಿನಿಯರ್‌ರವರ ವರದಿಯನ್ನು ಪರಿಶೀಲಿಸಿ ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಇವರು ಸರ್ಕಾರಿ ಹಣ ದುರುಪಯೋಗ ಪಡಿಸಿಕೊಂಡಿರುವುದು ಹಾಗೂ ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ತೀವ್ರ ಲೋಪ ಮತ್ತು ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ, ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಕೈಗೊಳ್ಳಲು ಅವಲೋಕಿಸಿ ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಅಧೀಕ್ಷಕ ಅಭಿಯಂತರವರ ಕಛೇರಿ, ಪಂ.ರಾ.ಇಂ. ವೃತ್ತ, ಗುಲ್ಬರ್ಗಾ ಇವರನ್ನು ಅಮಾನತ್ತಿನಲ್ಲಿಡಲು ಸರ್ಕಾರವು ನಿರ್ಣಯಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 01 ಇಎನ್‌ಕ್ಯೂ 06 ಬೆಂಗಳೂರು, ದಿನಾಂಕ: 7ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ 10ನೇ ನಿಯಮದ 1(ಡಿ) ಉಪ-ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್, ಅಧೀಕ್ಷಕ ಅಭಿಯಂತರವರ ಕಛೇರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ವೃತ್ತ, ಗುಲ್ಬರ್ಗಾ ಇವರ ಮೇಲೆ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು, ಇವರನ್ನು ತರ್ತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್ ಇವರಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ರವಿಸೂರನ್, ಸಹಾಯಕ ಇಂಜಿನಿಯರ್ ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ತಮ್ಮ ಕಛೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 105

**ಎಸ್.ಸಿ. ಸುಂದರ,**
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

**ವಿಷಯ:** ಶ್ರೀ ಸಿ.ಜಿ.ಶೆಲ್ಲಿಕೇರಿ, ಅಂದಿನ ಲೆಕ್ಕಾಧೀಕ್ಷಕರು; ಶ್ರೀ ಎ.ಕೆ.ಅರ್ಜುನಗಿ, ಅಂದಿನ ಸಹಾಯಕ ಇಂಜಿನಿಯರ್; ಮತ್ತು ಶ್ರೀ ಸಿ.ಕೆ. ಚೆನ್ನಶೆಟ್ಟಿ, ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಮುಂಡರಗಿ ಇವರುಗಳ ಮೇಲಿನ ಇಲಾಖಾ ವಿಚಾರಣೆ - ಆರೋಪಗಳಿಂದ ದೋಷಮುಕ್ತ ಗೊಳಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1) ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ. ಕಂಪ್ :ಉಪ ಲೋಕ್:ಬಿಜಿಎಂ:166:99-2000:ಎಆರ್‌ಎಲ್‌ಒ - 4, ದಿ. 6-2-2001 ರ ಪತ್ರ.
2) ಸರ್ಕಾರದ ಆದೇಶ ಸಂಖ್ಯೆ. ಗ್ರಾಅಪ:3:ಇಎನ್‌ಕ್ಯೂ:2001, ದಿ. 7-6-2001.
3) ಉಪ ಲೋಕಾಯುಕ್ತರ ಪತ್ರ ಸಂಖ್ಯೆ. LOK/ARE-1/ENQ-41/2002-03, ದಿ. 16-11-2005

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ. (1)ರ ಪತ್ರಗಳಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಗದಗ ಜಿಲ್ಲೆಯ ಗದಗ್ ಮತ್ತು ಮುಂಡರಗಿಯ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗಗಳಲ್ಲಿ 1993-94ನೇ ಸಾಲಿನಲ್ಲಿ ಜವಾಹರ್ ರೋಜಗಾರ್ ಯೋಜನೆ ಮತ್ತು ನಿರ್ಮಿತ ಯೋಜನೆಗಳಲ್ಲಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವಾಗ ಅಸಮರ್ಪಕ ನಿರ್ವಹಣೆ, ಸುಳ್ಳು ದಾಖಲೆಗಳನ್ನು ಸೃಷ್ಟಿಸಿರುವ ಹಾಗೂ ಹಣದ ದುರುಪಯೋಗವಾಗಿದೆಯೆಂಬ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ರನ್ವಯ ಮಾನ್ಯ ಉಪ ಲೋಕಾಯುಕ್ತರು ತನಿಖೆ ನಡೆಸಿ, ಸದರಿ ಕಾಯ್ದೆಯ ಕಲಂ 12 (3) ರನ್ವಯ ಸಲ್ಲಿಸಿದ್ದ ವರದಿಯಲ್ಲಿ ಈ ಕೆಳಕಂಡ ಅಧಿಕಾರಿ : ನೌಕರರು ರೂ.3,24,064-81 ಮತ್ತು ರೂ.2,01,262-81ಗಳನ್ನು ದುರುಪಯೋಗಪಡಿಸಿ ಕೊಂಡಿರುವುದಾಗಿ ತಿಳಿಸಿದ್ದರು.

1. ಶ್ರೀ ಎಸ್.ಎ.ಸಜ್ಜನರ್, ಸಕಾಪಾಇಂ, ಜಿಪಂಇಂ ಉಪ ವಿಭಾಗ, ಮುಂಡರಗಿ.
2. ಶ್ರೀ ಎಲ್.ಆರ್. ರಾಘಾ, ಹಿಂದಿನ ಕಾಪಾಇಂ,ಜಿಪಂಇಂ ಉಪ ವಿಭಾಗ, ಮುಂಡರಗಿ.
3. ಶ್ರೀ ಸಿ.ಜಿ.ಶೆಲ್ಲಿಕೇರಿ, ಲೆಕ್ಕಾಧೀಕ್ಷಕರು, ಜಿಪಂಇಂ ಉಪ ವಿಭಾಗ, ಮುಂಡರಗಿ.
4. ಶ್ರೀ ಎ.ಕೆ.ಅರ್ಜುನಗಿ, ಸ.ಇಂ. ಜಿಪಂಇಂ ಉಪ ವಿಭಾಗ, ಮುಂಡರಗಿ.
5. ಶ್ರೀ ಎಸ್.ಎನ್. ಗಲಗಲಿ, ಕಿರಿಯ ಇಂಜಿನಿಯರ್, ಜಿಪಂಇಂ ಉಪ ವಿಭಾಗ, ಮುಂಡರಗಿ.
6. ಶ್ರೀ ಸಿ.ಕೆ.ಚೆನ್ನಶೆಟ್ಟಿ, ಕಿರಿಯ ಇಂಜಿನಿಯರ್, ಜಿಪಂಇಂ ಉಪ ವಿಭಾಗ, ಮುಂಡರಗಿ.
7. ಶ್ರೀ ಹೆಚ್.ಬಿ. ದಡ್ಡಿ, ಕಿರಿಯ ಇಂಜಿನಿಯರ್, ಜಿಪಂಇಂ ಉಪ ವಿಭಾಗ, ಮುಂಡರಗಿ.

ಈ ಪ್ರಕರಣದಲ್ಲಿ ಭಾಗಿಯಾಗಿರುವ ಮೇಲೆ ನಮೂದಿಸಿರುವ ಆಪಾದಿತ ಇಂಜಿನಿಯರ್‌ಗಳ ಪೈಕಿ ಶ್ರೀ ಎಲ್.ಆರ್.ರಾಘಾ, ಹಿಂದಿನ ಕಾಪಾಇಂ, ಶ್ರೀ ಎಸ್.ಎನ್. ಗಲಗಲಿ, ಕಿರಿಯ ಇಂಜಿನಿಯರ್ ಮತ್ತು ಶ್ರೀ ಹೆಚ್.ಬಿ. ದಡ್ಡಿ, ಕಿರಿಯ ಇಂಜಿನಿಯರ್ ಇವರುಗಳು ಈಗಾಗಲೇ ಸೇವೆಯಿಂದ ನಿವೃತ್ತಿ ಹೊಂದಿದ್ದು, ಹಾಗೂ ಘಟನೆಗಳು 4 ವರ್ಷಗಳಿಗಿಂತ ಹಳೆಯದಾಗಿರುವುದರಿಂದ ಅವರುಗಳ ವಿರುದ್ಧ ಮುಂದಿನ ವಿಚಾರಣಾ ನಡವಳಿಗಳನ್ನು ಕೈಬಿಡಲಾಗಿದೆಯೆಂದೂ ಮೇಲೆ ಓದಲಾದ ಲೋಕಾಯುಕ್ತರವರ ಪತ್ರ ದಿ. 6-2-2001 ರಲ್ಲಿ ತಿಳಿಸಲಾಗಿತ್ತು. ಇದಲ್ಲದೇ ಶ್ರೀ ಎಸ್.ಎ.ಸಜ್ಜನರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ದಿ. 5-10-2000 ರಂದು ನಿಧನ ಹೊಂದಿದ್ದು ಅವರನ್ನು ಹೊರತುಪಡಿಸಿ, ಉಳಿದ ಮೂರು ಅಧಿಕಾರಿ / ನೌಕರರುಗಳಾದ ಶ್ರೀ ಸಿ.ಜಿ.ಶೆಲ್ಲಿಕೇರಿ, ಅಂದಿನ ಲೆಕ್ಕಾಧೀಕ್ಷಕರು; ಶ್ರೀ ಎ.ಕೆ.ಅರ್ಜುನಗಿ, ಅಂದಿನ ಸಹಾಯಕ ಇಂಜಿನಿಯರ್; ಮತ್ತು ಶ್ರೀ ಸಿ.ಕೆ. ಚೆನ್ನಶೆಟ್ಟಿ, ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಮುಂಡರಗಿ ಇವರುಗಳ ವಿರುದ್ಧ ನಿಯಮಾವಳಿಗಳಂತೆ ಶಿಸ್ತಿನ ಕ್ರಮ ತೆಗೆದುಕೊಳ್ಳಲು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984 ರ ಕಲಂ 12 (3) ರನ್ವಯ ಮಾನ್ಯ ಉಪ ಲೋಕಾಯುಕ್ತರು ಶಿಫಾರಸ್ಸು ಮಾಡಿದ್ದರು.

ಸರ್ಕಾರವು ಮಾನ್ಯ ಉಪ ಲೋಕಾಯುಕ್ತರ ವರದಿಯನ್ನು ಪರಿಶೀಲಿಸಿ, ಅದನ್ನು ಒಪ್ಪಲು ನಿರ್ಧರಿಸಿ, ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಸದರಿ ಮೂವರು ಅಧಿಕಾರಿ / ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957 ರ ನಿಯಮ 11 ರಡಿಯಲ್ಲಿನ ವಿಧಾನದಂತೆ ನಿಯಮ 13 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಅದೇ ನಿಯಮಗಳ ನಿಯಮ 14 ಎ ರನ್ವಯ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಮಾನ್ಯ ಉಪ ಲೋಕಾಯುಕ್ತ ಪತ್ರದಲ್ಲಿ ಸದರಿ ಆಪಾದಿತ ಅಧಿಕಾರಿಗಳ ವಿರುದ್ಧ ವಿಚಾರಣೆಯನ್ನು ಲೋಕಾಯುಕ್ತ ಕಛೇರಿಯ ಅಧಿಕ ನಿಬಂಧಕರು, ವಿಚಾರಣೆಗಳು-1 ಇವರಿಂದ ಮಾಡಿಸಲಾಗಿದ್ದು, ಇವರು ತಮ್ಮ ವಿವರವಾದ ವಿಚಾರಣಾ ವರದಿಯಲ್ಲಿ ಪ್ರತಿಯೊಬ್ಬ ಆಪಾದಿತ ಅಧಿಕಾರಿಯ ವಿರುದ್ಧ ಮಾಡಲಾದ ಐದು ಆಪಾದನೆಗಳನ್ನು ವಿವರವಾಗಿ ವಿಚಾರಣೆ ನಡೆಸಿದ್ದು, ಈ ಆಪಾದನೆಗಳು ಬಹುತೇಕ ಗದಗ್ ಮತ್ತು ಮುಂಡರಗಿ ತಾಲ್ಲೂಕಿನಲ್ಲಿ ಜೆ.ಆರ್.ವೈ. ಸ್ಕೀಂನಲ್ಲಿ ಕಟ್ಟಲಾದ ಶಾಲಾ ಕೊಠಡಿಗಳ ನಿರ್ಮಾಣಕ್ಕೆ ಸಂಬಂಧಪಟ್ಟ ಆಪಾದನೆಗಳಾಗಿದ್ದು, ವಿಚಾರಣಾ ವರದಿಯಲ್ಲಿ ಈ ಮೂವರ ವಿರುದ್ಧ ಮಾಡಲಾದ ತಲಾ 5 ಆಪಾದನೆಗಳಲ್ಲಿ ಯಾವೊಂದೂ ಆಪಾದನೆಗಳು ರುಜುವಾತಾಗಿಲ್ಲವೆಂದು ಸ್ಪಷ್ಟವಾಗಿ ತಿಳಿಸಿರುತ್ತಾರೆ. ಸದರಿ ವಿಚಾರಣಾ ವರದಿಗೆ ಮಾನ್ಯ ಉಪ ಲೋಕಾಯುಕ್ತರು ಸಹಮತಿ ವ್ಯಕ್ತಪಡಿಸಿ, ಸದರಿ 3 ಆಪಾದಿತ ಅಧಿಕಾರಿಗಳ ವಿರುದ್ಧದ ಮುಂದಿನ ಶಿಸ್ತು ಕ್ರಮಗಳನ್ನು ಕೈಬಿಡಲು ಶಿಫಾರಸ್ಸು ಮಾಡಿರುತ್ತಾರೆ. ಸರ್ಕಾರವು ಸದರಿ ವಿಚಾರಣಾ ವರದಿಯನ್ನು ಒಪ್ಪಿ ಪ್ರಕರಣದಲ್ಲಿನ ಮೂರು ಜನ ಆಪಾದಿತ ಅಧಿಕಾರಿ / ನೌಕರರನ್ನು ಅವರ ವಿರುದ್ಧ ಮಾಡಲಾದ ಆಪಾದನೆಗಳಿಂದ ದೋಷಮುಕ್ತರನ್ನಾಗಿಸಲು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 3 ಇಎನ್‌ಕ್ಯೂ 2001, ಬೆಂಗಳೂರು, ದಿನಾಂಕ. 5ನೇ ಜನವರಿ 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿ.ಜಿ.ಶೆಲ್ಲಿಕೇರಿ, ಅಂದಿನ ಲೆಕ್ಕಾಧೀಕ್ಷಕರು; ಶ್ರೀ ಎ.ಕೆ.ಅರ್ಜುನಗಿ, ಅಂದಿನ ಸಹಾಯಕ ಇಂಜಿನಿಯರ್; ಮತ್ತು ಶ್ರೀ ಸಿ.ಕೆ. ಚೆನ್ನಶೆಟ್ಟಿ, ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಮುಂಡರಗಿ ಇವರುಗಳ ಮೇಲೆ ಮಾಡಲಾಗಿದ್ದ ಆಪಾದನೆಗಳು ವಿವರವಾದ ವಿಚಾರಣೆಯಲ್ಲಿ ರುಜುವಾತಾಗದಿರುವುದರಿಂದ, ಸದರಿ ಅಧಿಕಾರಿ / ನೌಕರರುಗಳನ್ನು ಅವರ ಮೇಲಿನ ಆರೋಪಗಳಿಂದ ಸರ್ಕಾರವು ದೋಷಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 106

**ಎಸ್.ಸಿ. ಸುಂದರ,**
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಏಕರೂಪ ಶಾಸನ ಜಾರಿಗೆ ಬಂದಿರುವ ಹಿನ್ನಲೆಯಲ್ಲಿ ಧಾರ್ಮಿಕ ದತ್ತಿ ಇಲಾಖೆಯ ಹುದ್ದೆಗಳನ್ನು ರಾಜ್ಯದಲ್ಲಿನ ವಿವಿಧ ಕಛೇರಿಗಳಿಗೆ ಸ್ಥಳಾಂತರಿಸಿರುವ ಆದೇಶದಲ್ಲಿ ಮಾರ್ಪಾಡು ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ.ಕಂಇ 57 ಮುಸೇವಿ 2001 (ಭಾಗ)ದಿ:10/03/2005
2) ಹಾಸನ ಜಿಲ್ಲಾಧಿಕಾರಿಗಳ ಪತ್ರ ಸಂ.ಡಿವಿಎಸ್/(1)/ಸಿಆರ್/177/2004-05 ದಿನಾಂಕ: 26/02/2005
3) ಶಿವಮೊಗ್ಗ ಜಿಲ್ಲಾಧಿಕಾರಿಗಳ ಅರೆ ಸರ್ಕಾರಿ ಪತ್ರ ಸಂ.ಡಿವಿಎಸ್/(3)/ಸಿಆರ್/233/2004-05 ದಿನಾಂಕ:26/03/2005
4) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ.ಸಿಬ್ಬಂದಿ/1/ಸಿಆರ್/139/2000-2001 ದಿನಾಂಕ: 30/07/2005.

ಪ್ರಸ್ತಾವನೆ:-

ರಾಜ್ಯದ ಧಾರ್ಮಿಕ ಸಂಸ್ಥೆ ಹಾಗೂ ದೇವಾಲಯಗಳ ಆಡಳಿತವನ್ನು ರಾಜ್ಯ ಪುನರ್ ವಿಂಗಡನೆ ಮುಂಚೆ 5 ವಿಭಿನ್ನ ಕಾಯಿದೆಯಡಿ ಧಾರ್ಮಿಕ ದತ್ತಿ ಇಲಾಖೆಯಡಿ ನಿರ್ವಹಿಸಲಾಗುತ್ತಿತ್ತು. ಈ ಎಲ್ಲಾ ಧಾರ್ಮಿಕ ಸಂಸ್ಥೆಗಳ ದೇವಾಲಯದ ಆಡಳಿತವನ್ನು ಏಕರೂಪದಲ್ಲಿ ನಿರ್ವಹಿಸುವ ದೃಷ್ಟಿಯಿಂದ ಏಕರೂಪ ಶಾಸನ ಕಾಯಿದೆ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ಮತ್ತು ನಿಯಮಗಳು 2002ನ್ನು ದಿ:01/05/2003ರಿಂದ ಜಾರಿಗೆ ತರಲಾಗಿರುತ್ತದೆ. ಧಾರ್ಮಿಕ ದತ್ತಿ ಇಲಾಖೆಯಲ್ಲಿ ಹಾಲಿ ಇರುವ ಖಾಯಂ ಮತ್ತು ಹಂಗಾಮಿ ಹುದ್ದೆಗಳನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ರನ್ವಯ ಇಲಾಖೆಯ ಕರ್ತವ್ಯವನ್ನು ನಿರ್ವಹಿಸಲು ಅನುವಾಗುವಂತೆ ಇಲಾಖೆಯ ವಿವಿಧ ಕಛೇರಿಗಳಿಗೆ ಸಿಬ್ಬಂದಿ ಮಾದರಿ (staffing pattern) ನಿಗದಿಪಡಿಸಿ ಅದಕ್ಕೆನುಗುಣವಾಗಿ ಹುದ್ದೆಗಳನ್ನು ಸ್ಥಳಾಂತರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಆದೇಶದಲ್ಲಿ ಆದೇಶಿಸಲಾಗಿದೆ.

ಹಾಸನ ಜಿಲ್ಲಾಧಿಕಾರಿಗಳ ಕಛೇರಿ ಗ್ರೂಪ್ 'ಬಿ' ವೃಂದದ ಮುಜರಾಯಿ ಸಹಾಯಕರ ಹುದ್ದೆಯನ್ನು ಸರ್ಕಾರದ ಆದೇಶ ಸಂಖ್ಯೆ:ಕಂಇ 247 ಮುಸೇವಿ 2003 ದಿನಾಂಕ:14/02/2005ರ ಆದೇಶದಲ್ಲಿ ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಕಛೇರಿ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸಲಾಗಿದೆ ಎಂದು, ಕಛೇರಿಯ ದೈನಂದಿನ ಆಡಳಿತ ದೃಷ್ಟಿಯಿಂದ ಈ ಹುದ್ದೆಯನ್ನು ಹಾಸನ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿಯೇ ಮುಂದುವರಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ:(2)ರ ಪತ್ರದಲ್ಲಿ ಹಾಸನ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಶಿವಮೊಗ್ಗ ಜಿಲ್ಲಾಧಿಕಾರಿಗಳ ಕಛೇರಿಯ ಅಧೀಕ್ಷರ ಹುದ್ದೆಯನ್ನು ಬಿಜಾಪುರ ಜಿಲ್ಲಾಧಿಕಾರಿಗಳ ಕಛೇರಿಗೆ ವರ್ಗಾಯಿಸಿರುವುದನ್ನು ರದ್ದುಪಡಿಸಿ, ಸದರಿ ಹುದ್ದೆಯನ್ನು ಶಿವಮೊಗ್ಗ ಜಿಲ್ಲಾಧಿಕಾರಿಗಳ ಕಛೇರಿಯಲ್ಲೇ ಮುಂದುವರೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ:(3)ರ ಪತ್ರದಲ್ಲಿ ಶಿವಮೊಗ್ಗ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಈ ಬಗ್ಗೆ ಧಾರ್ಮಿಕ ದತ್ತಿ ಆಯುಕ್ತರವರಿಂದ ವರದಿ ಕೋರಲಾಗಿತ್ತು.

ಸಹಾಯಕ ಆಯುಕ್ತರು, ಮುಜರಾಯಿ ಕಾಮಗಾರಿಗಳು, ಬೆಂಗಳೂರು ನಗರ ಸಭಾ ವಲಯದ ಗ್ರೂಪ್ ಬಿ ವೃಂದದ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಯನ್ನು ಹಾಸನ ಜಿಲ್ಲಾಧಿಕಾರಿಗಳ ಕಛೇರಿಗೆ ಮುಜರಾಯಿ ಸಹಾಯಕರಾಗಿ ಸ್ಥಳಾಂತರಿಸಲು ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಕಛೇರಿ, ಬೆಂಗಳೂರಿನ ಅಧೀಕ್ಷಕರ ಹುದ್ದೆಯನ್ನು ಗದಗ್ ಜಿಲ್ಲಾಧಿಕಾರಿಗಳ ಕಛೇರಿಗೆ ಸ್ಥಳಾಂತರಿಸಿರುವುದನ್ನು ರದ್ದುಪಡಿಸಿ, ಸದರಿ ಹುದ್ದೆಯನ್ನು ಅದೇ ಕಛೇರಿಯಲ್ಲಿಯೇ ಮುಂದುವರೆಸಲು ಹಾಗೂ ಹಾಸನ ಜಿಲ್ಲಾಧಿಕಾರಿಗಳ ಅಧೀಕ್ಷಕರ ಹುದ್ದೆಯನ್ನು ಗದಗ್ ಜಿಲ್ಲಾಧಿಕಾರಿಗಳ ಕಛೇರಿಗೆ ಸ್ಥಳಾಂತರಿಸಬಹುದೆಂದು ಧಾರ್ಮಿಕ ದತ್ತಿ ಆಯುಕ್ತರು ವರದಿ ಮಾಡಿರುತ್ತಾರೆ. ಮುಂದುವರೆದು, ಬೆಂಗಳೂರು ಮತ್ತು ಮೈಸೂರು ವಿಭಾಗಗಳಿಗೆ ದೇವಾಲಯಗಳ ಸ್ವತ್ತಿನ, ಜಮೀನಿನ ರಕ್ಷಣೆ, ದಾಖಲೆಗಳನ್ನು ಕ್ರೋಢೀಕರಿಸಲು ಕೆ.ಎ.ಎಸ್. ವರ್ಗದ ಹುದ್ದೆಗಳನ್ನು ಸೃಜಿಸಲು ಸರ್ಕಾರಕ್ಕೆ ಬರೆದಿರುವುದರಿಂದ ದತ್ತಿ ಸಹಾಯಕ ಆಯುಕ್ತರಿಗೆ ಕೆಲಸದ ಹೊರೆ ಕಡಿಮೆಯಾಗುವುದರಿಂದ ತುಮಕೂರು ಹಾಗೂ ಮಂಡ್ಯ ಎರಡು ಜಿಲ್ಲೆಗಳ ಕಾರ್ಯವ್ಯಾಪ್ತಿಯನ್ನು ಅನುಕ್ರಮವಾಗಿ, ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದತ್ತಿ ಸಹಾಯಕ ಆಯುಕ್ತರಿಗೆ ವಹಿಸಲು ಹಾಗೂ ದತ್ತಿ ಸಹಾಯಕ ಆಯುಕ್ತರು ಚಾಮರಾಜನಗರ ಜಿಲ್ಲೆ, ಈ ಕಛೇರಿಯನ್ನು ಹುದ್ದೆಗಳೊಂದಿಗೆ ಈಗಾಗಲೇ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸ್ಥಳಾಂತರಿಸಿರುವಂತೆ ಬದಲಾವಣೆ ಮಾಡದಿರಲು ಹಾಗೂ ಮಂಡ್ಯ ಮತ್ತು ಪಾಂಡವಪುರ ಉಪವಿಭಾಗಾಧಿಕಾರಿಗಳ ಕಛೇರಿಗೆ ನಿಗದಿಪಡಿಸಿರುವ ಪ್ರಥಮ ದರ್ಜೆ ಸಹಾಯಕ ಹಾಗೂ ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ, ದತ್ತಿ ಸಹಾಯಕ ಆಯುಕ್ತರ ಕಛೇರಿಗೆ ಸ್ಥಳಾಂತರಿಸಿ, ನಿಗದಿಪಡಿಸಿ ಸರ್ಕಾರದ ಆದೇಶ ಸಂಖ್ಯೆ:ಕಂಇ 57 ಮುಸೇವಿ 2001 ದಿನಾಂಕ:10/03/2005ರ ಆದೇಶದಲ್ಲಿ ಧಾರ್ಮಿಕ ದತ್ತಿ ಇಲಾಖೆಯ ವಿವಿಧ ಕಛೇರಿಗಳಿಗೆ ನಿಗದಿಪಡಿಸಿರುವ ಸಿಬ್ಬಂದಿ ಮಾದರಿಯಲ್ಲಿ (staffing pattern) ಮಾರ್ಪಾಡು ಮಾಡಿ ಅದರಂತೆ ಹುದ್ದೆಗಳನ್ನು ಸ್ಥಳಾಂತರಿಸಲು ಮಾರ್ಪಾಟುಗಳನ್ನು ಮಾಡಲು ಕೋರಿ ಮೇಲೆ ಓದಲಾದ ಕ್ರಮ ಸಂಖ್ಯೆ:(4)ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ನೀಡಿರುತ್ತಾರೆ.

ಈ ವಿಷಯವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 57 ಮುಸೇವಿ 2001, ಬೆಂಗಳೂರು, ದಿನಾಂಕ: 22ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಕಂಇ 57 ಮುಸೇವಿ 2001 ದಿನಾಂಕ:10/03/2005ರಲ್ಲಿ ಧಾರ್ಮಿಕ ದತ್ತಿ ಇಲಾಖೆಯಲ್ಲಿನ ಹಾಲಿ ಇರುವ ಖಾಯಂ ಮತ್ತು ಹಂಗಾಮಿ ಹುದ್ದೆಗಳನ್ನು ವಿವಿಧ ಕಛೇರಿಗಳಿಗೆ ಹಂಚಿಕೆ ಮಾಡಿ ಅನುಬಂಧ-1ರಲ್ಲಿ ನಿಗದಿಪಡಿಸಿರುವ ಸಿಬ್ಬಂದಿ ಮಾದರಿಯಲ್ಲಿ (staffing pattern) ಹಾಗೂ ಇಲಾಖೆಯ ವಿವಿಧ ವರ್ಗಗಳ ಹುದ್ದೆಗಳನ್ನು ವಿವಿಧ ಕಛೇರಿಗಳಿಗೆ ಅನುಬಂಧ-2ರಲ್ಲಿ ಸೂಚಿಸಿ, ಸ್ಥಳಾಂತರಿಸಿರುವ ಹುದ್ದೆಗಳಲ್ಲಿ ಈ ಕೆಳಕಂಡಂತೆ ಕೆಲವು ಹುದ್ದೆಗಳ ಮಾರ್ಪಾಟು ಮಾಡಿ, ಆದೇಶಿಸಿದೆ.

**ಅನುಬಂಧ-I**

| ಕ್ರ. ಸಂ. | ಅನುಬಂಧ-1ರಲ್ಲಿ ಪ್ರಸ್ತುತ ಇರುವುದು | ಮಾರ್ಪಾಟುಗಳು |
|---|---|---|
| 1 | ಕ್ರಮ ಸಂಖ್ಯೆ:(1)ರ ಅಧೀಕ್ಷಕರು ಹುದ್ದೆ 3 | ಕ್ರಮ ಸಂಖ್ಯೆ:(1)ರ ಅಧೀಕ್ಷಕರು ಹುದ್ದೆ 4 |
| 2 | ಕ್ರಮ ಸಂಖ್ಯೆ:(2)ರ ಸಹಾಯಕ ಆಯುಕ್ತರು ಕಛೇರಿ, ಬೆಂಗಳೂರು ನಗರ ಜಿಲ್ಲೆ ಪತ್ರಾಂಕಿತ ವ್ಯವಸ್ಥಾಪಕರು, ಗ್ರೂಪ್ ಬಿ 1 ಹುದ್ದೆ | ಕ್ರಮ ಸಂಖ್ಯೆ:(2)ರ ಸಹಾಯಕ ಆಯುಕ್ತರು ಕಛೇರಿ, ಬೆಂಗಳೂರು ನಗರ ಜಿಲ್ಲೆ ರಡಿ ಪತ್ರಾಂಕಿತ ವ್ಯವಸ್ಥಾಪಕರು, ಗ್ರೂಪ್ ಬಿ 1 ಹುದ್ದೆ ರದ್ದುಪಡಿಸಿದೆ |
| 3 | ಕ್ರಮ ಸಂಖ್ಯೆ:(8)ರ ಜಿಲ್ಲಾಧಿಕಾರಿ ಕಛೇರಿ ಹಾಸನ ಅಧೀಕ್ಷಕರು, ಗ್ರೂಪ್ ಸಿ 1 ಹುದ್ದೆ | ಕ್ರಮ ಸಂಖ್ಯೆ:(8)ರ ಜಿಲ್ಲಾಧಿಕಾರಿ ಕಛೇರಿ ಹಾಸನ ದತ್ತಿ ಸಹಾಯಕರು, ಗ್ರೂಪ್ ಬಿ 1 ಹುದ್ದೆ |
| 4 | ಕ್ರಮ ಸಂಖ್ಯೆ:(10)ರ ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ದತ್ತಿ ಸಹಾಯಕರು ಗ್ರೂಪ್ 'ಬಿ'-1 ಹುದ್ದೆ | ಕ್ರಮ ಸಂಖ್ಯೆ:(10)ರ ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಅಧೀಕ್ಷಕರು ಗ್ರೂಪ್ 'ಸಿ'-1 ಹುದ್ದೆ |
| 5 | ಕ್ರಮ ಸಂಖ್ಯೆ:(21)ರ ಜಿಲ್ಲಾಧಿಕಾರಿಗಳ ಕಛೇರಿ, ಬಿಜಾಪುರ ಅಧೀಕ್ಷಕರು ಗ್ರೂಪ್ 'ಸಿ'-1 ಹುದ್ದೆ | ಕ್ರಮ ಸಂಖ್ಯೆ:(21)ರ ಜಿಲ್ಲಾಧಿಕಾರಿಗಳ ಕಛೇರಿ, ಬಿಜಾಪುರ ದತ್ತಿ ಸಹಾಯಕರು ಗ್ರೂಪ್ 'ಬಿ'-1 ಹುದ್ದೆ |

ಅನುಬಂಧ-II

| ಕ್ರ. ಸಂ. | ಅನುಬಂಧ-2ರಲ್ಲಿ ಪ್ರಸ್ತುತ ಇರುವುದು | ಮಾರ್ಪಾಟುಗಳು |
|---|---|---|
| 1 | ಕ್ರಮ ಸಂಖ್ಯೆ:(1) ರ ಧಾರ್ಮಿಕ ದತ್ತಿ ಆಯುಕ್ತರ ಕಛೇರಿ, ಬೆಂಗಳೂರು ಅಧೀಕ್ಷಕರು, 1ಹುದ್ದೆ ಗದಗ್ ಜಿಲ್ಲಾಧಿಕಾರಿಗಳ ಕಛೇರಿಗೆ ಸ್ಥಳಾಂತರಿಸಿರುವುದು | ಕ್ರಮ ಸಂಖ್ಯೆ:(1)ರ ಧಾರ್ಮಿಕ ದತ್ತಿ ಆಯುಕ್ತರ ಕಛೇರಿ, ಬೆಂಗಳೂರು ಅಧೀಕ್ಷಕರು, 1ಹುದ್ದೆ ಗದಗ್ ಜಿಲ್ಲಾಧಿಕಾರಿಗಳ ಕಛೇರಿಗೆ ಸ್ಥಳಾಂತರಿಸಿರುವುದನ್ನು ರದ್ದುಪಡಿಸಿದೆ |
| 2 | ಕ್ರಮ ಸಂಖ್ಯೆ:(3) ರಲ್ಲಿ ಪರಿಗಣಿಸಿಲ್ಲ. | ಕ್ರಮ ಸಂಖ್ಯೆ:(3)ರ ಸಹಾಯಕ ಆಯುಕ್ತರ ಕಛೇರಿ, ಬೆಂಗಳೂರು ನಗರ ಸಭಾ ವಲಯ, ಬೆಂಗಳೂರು, ಪತ್ರಾಂಕಿತ ವ್ಯವಸ್ಥಾಪಕರು, 1 ಹುದ್ದೆಯನ್ನು ಜಿಲ್ಲಾಧಿಕಾರಿಗಳ ಕಛೇರಿ, ಹಾಸನಕ್ಕೆ ದತ್ತಿ ಸಹಾಯಕರು, 1ಹುದ್ದೆಯನ್ನಾಗಿ ಸ್ಥಳಾಂತರಿಸಿದೆ. |
| 3 | ಕ್ರಮ ಸಂಖ್ಯೆ:(20) ರಲ್ಲಿ ಪರಿಗಣಿಸಿಲ್ಲ. | ಕ್ರಮ ಸಂಖ್ಯೆ:(20)ರ ಜಿಲ್ಲಾಧಿಕಾರಿಗಳ ಕಛೇರಿ, ಹಾಸನ ಇಲ್ಲಿನ ಅಧೀಕ್ಷಕರು, 1 ಹುದ್ದೆಯನ್ನು ಜಿಲ್ಲಾಧಿಕಾರಿಗಳ ಕಛೇರಿ, ಗದಗಕ್ಕೆ ಸ್ಥಳಾಂತರಿಸಿದೆ |
| 4 | ಕ್ರಮ ಸಂಖ್ಯೆ:(25)ರ ಜಿಲ್ಲಾಧಿಕಾರಿಗಳ ಕಛೇರಿ ಶಿವಮೊಗ್ಗಅಧೀಕ್ಷಕರ -1 ಹುದ್ದೆಯನ್ನು ಬಿಜಾಪುರ ಜಿಲ್ಲಾಧಿಕಾರಿಗಳ ಕಛೇರಿಗೆ ಸ್ಥಳಾಂತರಿಸುವುದು | ಕ್ರಮ ಸಂಖ್ಯೆ: (25)ರ ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಇಲ್ಲಿನ ಅಧೀಕ್ಷಕರ–1 ಹುದ್ದೆಗೆ ಬದಲಾಗಿ ಮುಜರಾಯಿ ಸಹಾಯಕರ 1 ಹುದ್ದೆಯನ್ನು ದತ್ತಿ ಸಹಾಯಕರ 1 ಹುದ್ದೆಯನ್ನಾಗಿ ಬಿಜಾಪುರ ಜಿಲ್ಲಾಧಿಕಾರಿಗಳ ಕಛೇರಿಗೆ ಸ್ಥಳಾಂತರಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 139

**ರಮೇಶ್ ಕೆ. ಜಾಗೀರ್‌ದಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕಿಗೆ ನೋಟರಿ ನೇಮಿಸುವ ಕುರಿತು.

**ಓದಲಾಗಿದೆ:**
1) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರ ಪತ್ರ ದಿನಾಂಕ: 28.02.2005
2) ಸರ್ಕಾರದ ಪತ್ರ ಸಂಖ್ಯೆ: ಲಾ 141 ಎಲ್‌ಸಿಎಲ್ 2005 ದಿನಾಂಕ: 27.05.2005.
3) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರ ಪತ್ರ ದಿನಾಂಕ: 01.08.2005.

**ಪ್ರಸ್ತಾವನೆ:**

ಶ್ರೀ ಹೆಚ್.ಡಿ.ನಂಜುಂಡೇಗೌಡ, ನೋಟರಿ, ಅರಕಲಗೂಡು ಇವರು ದಿನಾಂಕ: 10.11.1997 ರಂದು ನಿಧನರಾಗಿರುವುದಾಗಿ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿದ್ದರು. ಸದರಿ ಹುದ್ದೆಯನ್ನು ಬೇರೆಯಾದವರಿಂದ ತುಂಬಲು ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರನ್ನು ಕೋರಲಾಗಿತ್ತು. ಆ ಮೇರೆಗೆ ಮೇಲೆ (3)ರಲ್ಲಿ ಓದಲಾದ ಪತ್ರದೊಂದಿಗೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 141 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2005**

ನೋಟರಿ ನಿಯಮಗಳ (1956) ನಿಯಮ 8(1)ರಡಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ ನೋಟರಿಗಳ ಅಧಿನಿಯಮ (1952) ಹಾಗೂ ಉಲ್ಲೇಖಿತ ನಿಯಮಗಳ ರೀತ್ಯ ಶ್ರೀ ಆರ್. ಗಣೇಶ ಶೆಟ್ಟಿ, ವಕೀಲರು, ಕಾಲೇಜು ರಸ್ತೆ, ಅರಕಲಗೂಡು ಹಾಸನ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಅರಕಲಗೂಡು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ` 0070 ಇತರೆ ಆಡಳಿತಾತ್ಮಕ ಸೇವೆಗಳು-01- ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000/- (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡ ಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲ ಹೆಚ್.ಆರ್.**

ಪಿ.ಆರ್. 45

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಶ್ರೀಮತಿ ರಮಾ ಜಿ ದರ್‌ಬಾರ್, ಬಿಜಾಪುರ ಇವರ ನೋಟರಿ ಪ್ರಮಾಣ ಪತ್ರವನ್ನು ನವೀಕರಿಸುವ ಬಗ್ಗೆ.

**ಓದಲಾಗಿದೆ:**
1) ಬಿಜಾಪುರ ಬಾರ್ ಅಸೋಸಿಯೇಷನ್ ಸದಸ್ಯರ ದಿನಾಂಕ: 04.08.1999ರ ದೂರು ಅರ್ಜಿ.
2) ಸರ್ಕಾರಿ ಆದೇಶ ಸಂಖ್ಯೆ: ಲಾ 178 ಎಲ್‌ಸಿಎಲ್ 99 ದಿನಾಂಕ: 09.12.1999.
3) ಸರ್ಕಾರಿ ಆದೇಶ ಪತ್ರ ಸಂಖ್ಯೆ: ಲಾ 123 ಎಲ್‌ಸಿಎಲ್ 02, ದಿನಾಂಕ: 06.10.2003.
4) ರಿಟ್ ಅರ್ಜಿ ಸಂಖ್ಯೆ: 49260:2003
5) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರ ಪತ್ರ ಸಂಖ್ಯೆ: ಸಿಪಿಎನ್:5120: 2005 ದಿನಾಂಕ: 08/09/2005.

**ಪ್ರಸ್ತಾವನೆ:**

ಶ್ರೀ ಕೆ.ಎನ್. ಇನಾಂದಾರ್, ಶ್ರೀ ಆರ್.ಸಿ. ಶಿವಪೂಜಿ ಮತ್ತು ಶ್ರೀಮತಿ ರಮಾ ಜಿ ದರ್‌ಬಾರ್ ನೋಟರಿಗಳು ಬಿಜಾಪುರ ಇವರ ವಿರುದ್ಧ ಬಿಜಾಪುರ ಬಾರ್ ಅಸೋಸಿಯೇಷನ್‌ನ ಕೆಲವು ಸದಸ್ಯರು ಮೇಲೆ (1)ರಲ್ಲಿ ಓದಲಾದ ಮನವಿಯಲ್ಲಿ ದೂರು ಸಲ್ಲಿಸಿದ್ದರು. ಆ ಕುರಿತಂತೆ ವಿಚಾರಣೆ ನಡೆಸಿ ವರದಿ ನೀಡುವಂತೆ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ಈ ಮಧ್ಯೆ ಶ್ರೀಮತಿ ರಮಾ ಜಿ ದರ್‌ಬಾರ್, ನೋಟರಿ ಇವರು ವೃತ್ತಿ ಪ್ರಮಾಣ ಪತ್ರವನ್ನು ದಿನಾಂಕ: 01.03.2002 ರಿಂದ ನವೀಕರಿಸುವಂತೆ ಮನವಿ ಸಲ್ಲಿಸಿದ್ದರು. ವಿಚಾರಣೆ ಬಾಕಿ ಇದ್ದ ಹಿನ್ನಲೆಯಲ್ಲಿ ಪ್ರಮಾಣ ಪತ್ರವನ್ನು ನವೀಕರಿಸಿರಲಿಲ್ಲ. ವೃತ್ತಿ ಪ್ರಮಾಣ ಪತ್ರದ ಅವಧಿ ಮುಗಿದ ನಂತರವೂ ನೋಟರಿ ಕರ್ತವ್ಯ ನಿರ್ವಹಿಸಿದ ಕಾರಣ ಅವರನ್ನು ಮೇಲೆ(3)ರಲ್ಲಿ ಓದಲಾದ ಆದೇಶದಲ್ಲಿ ನೋಟರಿ ನಿಯಮಗಳ (1956) ನಿಯಮ 13(12)(ಬಿ) (iii) ರೀತ್ಯ ನೋಟರಿ ವೃತ್ತಿಯಿಂದ ತೆಗೆದು ಹಾಕಲಾಗಿತ್ತು.

ಇದರ ವಿರುದ್ಧ ಶ್ರೀಮತಿ ರಮಾ ಜಿ ದರ್‌ಬಾರ್ ಇವರು ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:49260:03 ಸಲ್ಲಿಸಿದ್ದು ಉಚ್ಛ ನ್ಯಾಯಾಲಯವು ದಿನಾಂಕ: 15.06.2004ರಂದು ತಡೆಯಾಜ್ಞೆ ನೀಡಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರು ಮೇಲೆ (4)ರಲ್ಲಿ ಓದಲಾದ ಪತ್ರದೊಂದಿಗೆ ವಿಚಾರಣಾ ವರದಿ ಸಲ್ಲಿಸಿರುತ್ತಾರೆ.

ಸದರಿ ವರದಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 92 ಎಲ್‌ಸಿಎಲ್ 2001, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2005**

ಆದೇಶ ಸಂಖ್ಯೆ: ಲಾ 123 ಎಲ್‌ಸಿಎಲ್ 2002 ದಿನಾಂಕ: 06.10.2003ನ್ನು ಹಿಂದಕ್ಕೆ ಪಡೆಯುತ್ತಾ ಶ್ರೀಮತಿ ರಮಾ ಜಿ ದರ್‌ಬಾರ್, ನೋಟರಿ, ಬಿಜಾಪುರ ಇವರ ವೃತ್ತಿ ಪ್ರಮಾಣ ಪತ್ರವನ್ನು ದಿನಾಂಕ: 01.03.2002 ರಿಂದ ಐದು ವರ್ಷಗಳ ಅವಧಿಗೆ ನವೀಕರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲ ಹೆಚ್.ಆರ್.**

ಪಿ.ಆರ್. 46

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಶ್ರೀ.ಕೆ.ಎನ್.ಇನಾಂದಾರ್,ನೋಟರಿ,ಬಿಜಾಪುರ,ಇವರ ವೃತ್ತಿ ಪ್ರಮಾಣ ಪತ್ರ ನವೀಕರಣಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಬಿಜಾಪುರದ ಬಾರ್ ಅಸೋಸಿಯೇಶನ್ ಸದಸ್ಯರ ದಿನಾಂಕ:4-8-1999ರ ದೂರು ಅರ್ಜಿ
2) ಸರ್ಕಾರಿ ಆದೇಶ ಸಂಖ್ಯೆ:ಲಾ 178 ಎಲ್‌ಸಿಎಲ್ 99 ದಿನಾಂಕ:9-12-1999.
3) ರಿಟ್ ಅರ್ಜಿ ಸಂಖ್ಯೆ:15162:2002
4) ಸರ್ಕಾರಿ ಆದೇಶ ಸಂಖ್ಯೆ:ಲಾ 92 ಎಲ್‌ಸಿಎಲ್ 01 ದಿನಾಂಕ:17-01-2003
5) ಪತ್ರ ಸಂಖ್ಯೆ:ಸಿಪಿಎನ್:5120:2005 ದಿನಾಂಕ: 05-09-2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಮನವಿಯಲ್ಲಿ ಬಿಜಾಪುರ ಬಾರ್ ಅಸೋಸಿಯೇಷನ್‌ನ ಕೆಲವು ಸದಸ್ಯರು ಶ್ರೀಮತಿ ರಮಾ ಜಿ ದರ್‌ಬಾರ್, ಶ್ರೀ.ಕೆ.ಎನ್.ಇನಾಂದಾರ್ ಮತ್ತು ಶ್ರೀ ಆರ್.ಸಿ. ಶಿವಪೂಜಿ, ನೋಟರಿಗಳು, ಬಿಜಾಪುರ ಇವರ ವಿರುದ್ಧ ದೂರುಗಳನ್ನು ಸಲ್ಲಿಸಿದ್ದರು.

ಆ ಕುರಿತಂತೆ ವಿಚಾರಣೆ ನಡೆಸಿ ವರದಿ ನೀಡುವಂತೆ ಮೇಲೆ(2)ರಲ್ಲಿ ಓದಲಾದ ಆದೇಶದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,ಬಿಜಾಪುರ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಈ ಮಧ್ಯೆ ಶ್ರೀ.ಕೆ.ಎನ್.ಇನಾಂದಾರ್ ಇವರು ವೃತ್ತಿ ಪ್ರಮಾಣ ಪತ್ರ ನವೀಕರಿಸುವಂತೆ ಮನವಿ ಸಲ್ಲಿಸಿದ್ದರು ಆದರೆ ವಿಚಾರಣೆ ಬಾಕಿ ಇದ್ದ ಹಿನ್ನಲೆಯಲ್ಲಿ ಅವರ ನೋಟರಿ ಪ್ರಮಾಣ ಪತ್ರವನ್ನು ನವೀಕರಿಸಿರಲಿಲ್ಲ.

ಶ್ರೀ.ಕೆ.ಎನ್.ಇನಾಂದಾರ್,ನೋಟರಿ ಇವರು ಅವರ ವಿರುದ್ಧ ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:15162:2002 ಸಲ್ಲಿಸಿದ್ದು ದಿನಾಂಕ:03-01-2002 ರಂದು ತೀರ್ಮ ನೀಡಿತ್ತು.

ಆ ಮೇರೆಗೆ ಪರಿಶೀಲಿಸಿ ಸದರಿಯವರ ವೃತ್ತಿ ಪ್ರಮಾಣ ಪತ್ರವನ್ನು ನವೀಕರಿಸಬಹುದೆಂದು ಮೇಲೆ(4)ರಲ್ಲಿ ಒದಲಾದ ಆದೇಶದಲ್ಲಿ ತಿಳಿಸಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ಪತ್ರದೊಂದಿಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,ಬಿಜಾಪುರ ಇವರು ವಿಚಾರಣಾ ವರದಿ ಸಲ್ಲಿಸಿರುತ್ತಾರೆ.

ಸದರಿ ವಿಚಾರಣಾ ವರದಿ ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 92 ಎಲ್‌ಸಿಎಲ್ 2001, ಬೆಂಗಳೂರು,ದಿನಾಂಕ: 24ನೇ ಡಿಸೆಂಬರ್ 2005**

ಶ್ರೀ.ಕೆ.ಎನ್.ಇನಾಂದಾರ್,ನೋಟರಿ,ಬಿಜಾಪುರ ಇವರ ವೃತ್ತಿ ಪ್ರಮಾಣ ಪತ್ರವನ್ನು ದಿನಾಂಕ:02-07-2001 ರಿಂದ ಜಾರಿಗೆ ಬರುವಂತೆ ಐದು ವರ್ಷಗಳ ಅವಧಿಗೆ ನವೀಕರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲ ಹೆಚ್.ಆರ್.**

ಪಿ.ಆರ್. 47

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ವಿಷಯ:** ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 97 ಎಲ್‌ಸಿಎಲ್ 90 ದಿನಾಂಕ: 19.12.1991
2) ಸರ್ಕಾರಿ ಆದೇಶ ಸಂಖ್ಯೆ: ಲಾ 100 ಎಲ್‌ಸಿಎಲ್ 93 ದಿನಾಂಕ: 15.02.1994.
3) ಸರ್ಕಾರದ ಆದೇಶ ಸಂಖ್ಯೆ: ಲಾ 8 ಎಲ್‌ಸಿಎಲ್ 97 ದಿನಾಂಕ: 31.01.1998.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ರಾಜ್ಯದಲ್ಲಿನ ನೋಟರಿ ಹುದ್ದೆಗಳ ಸಂಖ್ಯೆಯನ್ನು 79 ರಿಂದ 200ಕ್ಕೆ ಹೆಚ್ಚಿಸಲಾಗಿತ್ತು. ನಂತರ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಹುದ್ದೆಗಳ ಸಂಖ್ಯೆಯನ್ನು 200 ರಿಂದ 300ಕ್ಕೆ ಹೆಚ್ಚಿಸಲಾಗಿತ್ತು. ತದನಂತರ ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ನೋಟರಿ ಹುದ್ದೆಗಳ ಸಂಖ್ಯೆಯನ್ನು 300 ರಿಂದ 544ಕ್ಕೆ ಹೆಚ್ಚಿಸಲಾಗಿದ್ದು, ನಂತರದ ಅವಧಿಯಲ್ಲಿ ಆಗಿಂದಾಗ್ಯೆ ಪ್ರತ್ಯೇಕವಾಗಿ 96 ಹುದ್ದೆಗಳನ್ನು ಸೃಜಿಸಿ ಅವುಗಳನ್ನು ಅರ್ಹ ವಕೀಲರುಗಳಿಂದ ತುಂಬಲಾಗಿದೆ.

ಭಾರತ ಸರ್ಕಾರವು ರಾಜ್ಯಕ್ಕೆ 675 ನೋಟರಿ ಹುದ್ದೆಗಳ ಮಿತಿ ನಿಗದಿಗೊಳಿಸಿದ್ದು ಇದುವರೆವಿಗೆ 640 ಹುದ್ದೆಗಳನ್ನು ಉಪಯೋಗಿಸಿಕೊಳ್ಳಲಾಗಿದೆ.

ಈ ಕುರಿತಂತೆ ಇತ್ತೀಚೆಗೆ ಸಾರ್ವಜನಿಕರು ಹಾಗೂ ಜನ ಪ್ರತಿನಿಧಿಗಳಿಂದ ಅನೇಕ ಮನವಿಗಳನ್ನು ಸ್ವೀಕರಿಸಲಾಗಿದ್ದು, ವಿವಿಧ ಕ್ಷೇತ್ರಗಳಲ್ಲಿ ಆಗಿರುವ ಬೆಳವಣಿಗೆಯನ್ನು ಗಮನದಲ್ಲಿಟ್ಟುಕೊಂಡು ಇನ್ನು ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸಲು ನಿರ್ಧರಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 209 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2005**

ಆ ಹಿನ್ನಲೆಯಲ್ಲಿ ಇನ್ನು 31 ನೋಟರಿ ಹುದ್ದೆಗಳನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಹೆಚ್ಚುವರಿಯಾಗಿ ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 209 ಎಲ್‌ಸಿಎಲ್ 2005 ದಿನಾಂಕ: 24.12.2005**

**ಅನುಬಂಧ**

| ಕ್ರಮ ಸಂಖ್ಯೆ | ಕೇಂದ್ರ ಸ್ಥಳ | ಹೊಸದಾಗಿ ಮಂಜೂರು ಮಾಡಿರುವ ಹುದ್ದೆಗಳ ಸಂಖ್ಯೆ | ಪ್ರಸ್ತುತ ಇರುವ ನೋಟರಿಗಳ ಸಂಖ್ಯೆ | ಒಟ್ಟು |
|---|---|---|---|---|
| 1. | ಬೆಂಗಳೂರು ನಗರ | 05 | 75 | 80 |
| 2. | **ಕೋಲಾರ ಜಿಲ್ಲೆ** | | | |
| | ಬಂಗಾರಪೇಟೆ | 01 | 02 | 03 |
| 3. | **ದಕ್ಷಿಣ ಕನ್ನಡ ಜಿಲ್ಲೆ** | | | |
| | ಮುಲ್ಕಿ | 01 | - | 01 |
| 4. | **ಉತ್ತರ ಕನ್ನಡ ಜಿಲ್ಲೆ** | | | |
| | ಕಾರವಾರ | 03 | 05 | 08 |
| | ಸಿರಸಿ | 02 | 03 | 05 |
| 5. | **ಗದಗ್ ಜಿಲ್ಲೆ** | | | |
| | ಗದಗ್ | 02 | 07 | 09 |
| 6. | **ಹಾವೇರಿ ಜಿಲ್ಲೆ** | | | |
| | ಹಾವೇರಿ | 02 | 04 | 06 |
| 7. | **ಧಾರವಾಡ ಜಿಲ್ಲೆ** | | | |
| | ಹುಬ್ಬಳ್ಳಿ-ಧಾರವಾಡ ನಗರ ಸಭಾ | - | 14 | 14 |
| | ಧಾರವಾಡ | 03 | 01 | 04 |
| | ಹುಬ್ಬಳ್ಳಿ | 02 | - | 02 |
| 8. | **ಬೆಳಗಾಂ ಜಿಲ್ಲೆ** | | | |
| | ಬೆಳಗಾಂ | 02 | 10 | 12 |
| | ಚಿಕ್ಕೋಡಿ | 02 | 06 | 08 |
| | ಹುಕ್ಕೇರಿ | 01 | 02 | 03 |
| 9. | **ಬಾಗಲಕೋಟೆ ಜಿಲ್ಲೆ** | | | |
| | ಬಾಗಲಕೋಟೆ | 02 | 04 | 06 |
| | ಬೀಳಗಿ | 01 | 02 | 03 |
| 10. | **ಕೊಪ್ಪಳ ಜಿಲ್ಲೆ** | | | |
| | ಕೊಪ್ಪಳ | 02 | 03 | 05 |

**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 52

**ವಿಷಯ:** ಶ್ರೀ.ಶಶಿಕಾಂತ ಎಸ್. ಮಾಲಗತ್ತಿ, ವಕೀಲರು, ಇವರನ್ನು ಮುದ್ದೇಬಿಹಾಳ್ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಪತ್ರ ಸಂಖ್ಯೆ:ಲಾ 1 ಎಲ್‌ಸಿಎಲ್ 05 ದಿನಾಂಕ 22-01-2005.
2) ಪತ್ರ ಸಿಪಿಎನ್/4708/05, ದಿನಾಂಕ: 18-8-05.

**ಪ್ರಸ್ತಾವನೆ:**

ಶ್ರೀ.ಎಸ್.ಎಸ್.ಪಾಟೀಲ್ ಕವಡಿಮಟ್ಟಿ,ನೋಟರಿ,ಮುದ್ದೇಬಿಹಾಳ್ ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಯ ಭರ್ತಿಗಾಗಿ ಅರ್ಜಿಗಳನ್ನು ಆಹ್ವಾನಿಸಿ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,ಬಿಜಾಪುರ ಇವರನ್ನು ಕೋರಲಾಗಿತ್ತು. ಆ ಮೇರೆಗೆ ಕ್ರಮ ಕೈಕೊಂಡು ಮೇಲೆ (2) ರಲ್ಲಿ ಓದಲಾದ ಪತ್ರದ ಜೊತೆಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಅರ್ಹ ವಕೀಲರ ಪ್ರಸ್ತಾವನೆ ಸಲ್ಲಿಸಿದ್ದರು.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಅದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 01 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 4ನೇ ಜನವರಿ 2005**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ.ಶಶಿಕಾಂತ ಎಸ್ ಮಾಲಗತ್ತಿ, ವಕೀಲರು ನೇತಾಜಿನಗರ, ಮುದ್ದೇಬಿಹಾಳ್, ಬಿಜಾಪುರ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಮುದ್ದೇಬಿಹಾಳ್ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01 - ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗಧಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಅ ಬಗೆಗಿನ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 91

**ವಿಷಯ:** ಬಿಜಾಪುರ ಜಿಲ್ಲೆ ಬಿಜಾಪುರ ಕಂದಾಯ ತಾಲ್ಲೂಕು ಇಲ್ಲಿಗೆ ಹೆಚ್ಚುವರಿ ನೋಟರಿ ನೇಮಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂ.ಲಾ 210 ಎಲ್‌ಸಿಎಲ್ 05 ದಿನಾಂಕ:24-8-2005.
2) ಸರ್ಕಾರಿ ಸಮಸಂಖ್ಯೆ ಪತ್ರ ಸಂಖ್ಯೆ:ಲಾ 210 ಎಲ್‌ಸಿಎಲ್ 05, ದಿನಾಂಕ:10-11-05
3) ಪತ್ರ ಸಂ:ಸಿ.ಪಿ.ಎನ್:6798/2005,ದಿನಾಂಕ: 1-12-2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಿಜಾಪುರ ಕಂದಾಯ ತಾಲ್ಲೂಕಿಗೆ ಎರಡು ನೋಟರಿ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಲಾಗಿತ್ತು. ಸದರಿ ಹುದ್ದೆಗಳಿಗೆ ಸೂಕ್ತ ವಕೀಲರನ್ನು ನೇಮಕಾತಿ ಮಾಡುವ ಸಲುವಾಗಿ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಅದೇಶಿಸಿದೆ.

**ಸರ್ಕಾರಿ ಆದೇಶ ಸಂ.ಲಾ 210 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 5ನೇ ಜನವರಿ 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ಶ್ರೀ.ಚಂದ್ರಶೇಖರ್ರ ವೆಂಕಪ್ಪ ಬದರಿ(ಸಿ.ವಿ.ಬದರಿ) ವಕೀಲರು ವೈಷ್ಣವಿ ಸಂತೋಷಿಮಾತಾ ಟೆಂಪಲ್ ರಸ್ತೆ, ವಿವೇಕನಗರ, ಬಿಜಾಪುರ ಇವರನ್ನು (ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ) ಐದು ವರ್ಷಗಳ ಅವಧಿಗೆ ಬಿಜಾಪುರ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ರೂ.1000/-ಗಳ ಮೊತ್ತದ ಶುಲ್ಕವನ್ನು ಲೆಕ್ಕ ಶೀರ್ಷಿಕೆ "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆಸ್ವೀಕೃತಿಗಳು-06 ಇತರೆ ಬಾಬುಗಳು" (0070-01-501-0-06)ಗೆ ಪಾವತಿಸಿರುವ ಮೂಲ ಚಲನ್ ಸಲ್ಲಿಸುವುದರ ಜೊತೆಗೆ ಅವರ ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲಾತಿ ಹಾಜರುಪಡಿಸಿದ ನಂತರ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ದ 4ನೇ ಪ್ರಕರಣದ ಪ್ರಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಎ. ಬಾಬು ರವೀಂದ್ರನಾಥ್ ಪಟೇಲ್**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 92

**ವಿಷಯ:** ಹಾಸನ ಕಂದಾಯ ತಾಲ್ಲೂಕಿಗೆ ನೋಟರಿ ನೇಮಿಸುವ ಕುರಿತು.

**ಓದಲಾಗಿದೆ:** 1) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರ ದಿನಾಂಕ: 28.02.2005ರ ಪತ್ರ.
2) ಸರ್ಕಾರಿ ಆದೇಶ ಸಂಖ್ಯೆ: ಲಾ 98 ಎಲ್‌ಸಿಎಲ್ 04, ದಿನಾಂಕ: 08.04.2005.
3) ಸರ್ಕಾರಿ ಪತ್ರ ಸಂಖ್ಯೆ: ಲಾ 139 ಎಲ್‌ಸಿಎಲ್ 05 ದಿನಾಂಕ: 23.05.2005.
4) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರ ಪತ್ರ ದಿನಾಂಕ: 01.08.2005.

**ಪ್ರಸ್ತಾವನೆ:**

ಶ್ರೀ ಬಿ. ಗಂಗಪ್ಪ, ನೋಟರಿ, ಹಾಸನ ಇವರು ದಿನಾಂಕ: 12.10.1997ರಂದು ನಿಧನರಾಗಿರುವುದಾಗಿ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ತಿಳಿಸಿದ್ದರು.

ಈ ಮಧ್ಯೆ ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಾಸನ ತಾಲ್ಲೂಕಿಗೆ ಹೆಚ್ಚುವರಿಯಾಗಿ ಮೂರು ಹುದ್ದೆಗಳನ್ನು ಸೃಜಿಸಲಾಗಿತ್ತು.

ಈ ಎಲ್ಲಾ ಹುದ್ದೆಗಳನ್ನು ತುಂಬುವ ಸಲುವಾಗಿ ನಿಯಮಗಳನ್ವಯ ಕ್ರಮಕೈಗೊಂಡು ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಸನ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರು ಮೇಲೆ (4)ರಲ್ಲಿ ಓದಲಾದ ಪತ್ರದೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 139 ಎಲ್‌ಸಿಎಲ್ 2005, ಬೆಂಗಳೂರು ದಿನಾಂಕ: 24ನೇ ಡಿಸೆಂಬರ್ 2005**

ನೋಟರಿ ನಿಯಮಗಳ (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರಡಿ ರಚಿಸಲಾಗಿರುವ ನಿಯಮಗಳ ರೀತ್ಯ ಈ ಕೆಳಗಿನವರನ್ನು ವೃತ್ತಿ ಪ್ರಮಾಣ ಪತ್ರ ನೀಡುವ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹಾಸನ ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

1) ಶ್ರೀ.ಡಿ.ಎಸ್.ರಾಧಾಕೃಷ್ಣ, ವಕೀಲರು, ಅಸರೆ, ಸುಭಾಷ್ ರಸ್ತೆ, ಸ್ಟೇಡಿಯಂ ಹಿಂಭಾಗ,ವಿದ್ಯಾನಗರ ಹಾಸನ.
2) ಶ್ರೀ.ಜಿ.ಸಿರಾಜ್ ಅಹ್ಮದ್,ವಕೀಲರು,ಗಾಂಧಿ ಬಜಾರ್ ಸರ್ಕಲ್ ಹಾಸನ.
3) ಶ್ರೀ.ಶೇಷಾದ್ರಿ, ವಕೀಲರು,ರಾಘವೇಂದ್ರ ನಿಲಯ,2ನೇ ಮೈನ್, 5ನೇ ಕ್ರಾಸ್ ಹೇಮಾವತಿ ನಗರ, ಹಾಸನ.
4) ಶ್ರೀ.ಎಸ್.ಎಸ್.ರೇಣುಕಾಪ್ರಸಾದ್,ವಕೀಲರು,ಕೆ.ಎಸ್,ಎಫ್.ಸಿ, ಆರ್.ಸಿ.ರಸ್ತೆ,ಹಾಸನ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01 - ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗಧಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಅ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 115

**ವಿಷಯ:** 2005-06ನೇ ಸಾಲಿಗೆ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್,ಬೆಂಗಳೂರು,ಇವರಿಗೆ ರೂ.9.80ಲಕ್ಷ ಅನುದಾನ ಮಂಜೂರಾತಿ:ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಅಧಿಸೂಚನೆ ಸಂಖ್ಯೆ ಲಾ 210 ಎಲ್‌ಸಿಎಲ್ 02 ದಿನಾಂಕ:10-7-2003.
2) ಅಸಿಸ್ಟೆಂಟ್ ರಿಜಿಸ್ಟ್ರಾರ್,ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಹೆಚ್ ಸಿಬಿ:230:83 ದಿನಾಂಕ:30-9-2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ:10-7-2003ರ ಅಧಿಸೂಚನೆಯನ್ವಯ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನೀಡುವ ಬಗ್ಗೆ ಸಹಾಯಾನುದಾನ ನಿಯಮಾವಳಿಗಳಿಗೆ ತಿದ್ದುಪಡಿ (Amendment) ತರಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2) ದಿನಾಂಕ:30-9-2004ರಪತ್ರದಲ್ಲಿ ಅಸಿಸ್ಟೆಂಟ್ ರಿಜಿಸ್ಟ್ರಾರ್ ಕರ್ನಾಟಕ ಉಚ್ಚ ನ್ಯಾಯಾಲಯ,ಬೆಂಗಳೂರು ಇವರು ಕೆಳಕಂಡ ಉದ್ದೇಶಗಳಿಗಾಗಿ ರೂ.9.80 ಲಕ್ಷ ಅನುದಾನವನ್ನು ಬಾರ್ ಕೌನ್ಸಿಲ್‌ಗೆ ಒದಗಿಸುವಂತೆ ಕೋರಿರುತ್ತಾರೆ.

1) ಕಿರಿಯ ವಕೀಲರುಗಳಿಗೆ ಕಾನೂನು ಕಮ್ಮಟ:ಕಾರ್ಯಾಗಾರ ಹಾಗೂ ವಕೀಲರುಗಳಿಗೆ ತರಬೇತಿ ನೀಡಲು.
2) ಸೆಮಿನಾರ್ ಮತ್ತು ಕಾನೂನು ಶಿಕ್ಷಣ ಕಾರ್ಯಕ್ರಮಗಳಿಗಾಗಿ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 228 ಎಲ್‌ಸಿಎಲ್ 2005, ಬೆಂಗಳೂರು,ದಿನಾಂಕ: 26ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಬಾರ್ ಕೌನ್ಸಿಲ್‌ಗೆ ಪ್ರಸಕ್ತ ಸಾಲಿಗೆ ರೂ.9.80ಲಕ್ಷಗಳ (ಒಂಭತ್ತು ಲಕ್ಷದ ಎಂಭತ್ತು ಸಾವಿರ ರೂ ಮಾತ್ರ) ಅನುದಾನವನ್ನು ಬಿಡುಗಡೆ ಮಾಡಿದೆ.

ಸದರಿ ಮೊತ್ತವನ್ನು ಮೇಲಿನ ಉದ್ದೇಶಗಳಿಗಾಗಿ ಮಾತ್ರ ವಿನಿಯೋಗಿಸತಕ್ಕದ್ದು.

2005-06ನೇ ಸಾಲಿನಲ್ಲಿ ಬಿಡುಗಡೆ ಮಾಡಲಾಗುವ ಮೊತ್ತಕ್ಕೆ ಉಪಯೋಗಿತ ಪ್ರಮಾಣ ಪತ್ರವನ್ನು (Utilization Certificate) ಅಡ್ವೊಕೇಟ್ ಜನರಲ್ (ಸಕ್ಷಮ ಪ್ರಾಧಿಕಾರದ) ರವರ ಮೇಲು ರುಜುವಿನೊಂದಿಗೆ ಸಲ್ಲಿಸುವ ಷರತ್ತಿಗೊಳಪಟ್ಟಿದೆ.

ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2014-00-800-4-00- ನ್ಯಾಯಾಲಯದ ನೌಕರರಿಗಾಗಿ ತರಬೇತಿ ಸಂಸ್ಥೆ ಇದರಡಿಯ ಉಪ ಶೀರ್ಷಿಕೆ-059- ಇತರೆ ಖರ್ಚು ಇದರಡಿಯ ಯೊಜನೇತರ ಬಾಬ್ತಿನಲ್ಲಿ ಒದಗಿಸಲಾದ ಹಣದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆ.ಟಿ ಸಂಖ್ಯೆ ಎಫ್‌ಡಿ 1093 ವೆಚ್ಚ-7/05 ದಿನಾಂಕ:15-12-05ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಕುಂತಲ ಹೆಚ್.ಆರ್.**

ಪಿ.ಆರ್. 116 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ.ಎಸ್.ಶಿವಲಿಂಗಂ, ತಮಿಳು ಭಾಷಾ ಉಪನ್ಯಾಸಕರು, ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, ಬಿ.ಪಿ.ವಾಡಿಯ ರಸ್ತೆ, ಬಸವನ ಗುಡಿ, ಬೆಂಗಳೂರು ಇವರ ಮೇಲಿನ ಶಿಸ್ತು ಕ್ರಮದಲ್ಲಿ ಅಂತಿಮ ಆದೇಶ.

**ಓದಲಾಗಿದೆ:**
1) ದಿನಾಂಕ:22.9.2003ರ ಪ.ಪೂ.ಶಿ.ಇ. ನಿರ್ದೇಶಕರ ಆದೇಶ ಸಂಖ್ಯೆ ಪಪೂಶಿಇ/ಎಂ.ಎಂ.025/1474/ಪೋಲೀಸ್ ವರದಿ/2003-04.
2) ದಿ:8.9.2004ರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಪಪೂಶಿಇ/ಎಂ.ಎಂ.025/1474/ ಪೋಲೀಸ್ ವರದಿ/2003-04.
3) ದಿ.14.1.2004ರ ಆದೇಶ ಸಂಖ್ಯೆ:ಪಪೂಶಿಇ/ಎಂ.ಎಂ. 025/1474/ಪೋಲೀಸ್ ವರದಿ/ 2003-04.
4) ವಿಚಾರಣಾಧಿಕಾರಿಗಳ ವರದಿ ದಿ:16.8.2004.
5) ಶ್ರೀ.ಎಸ್.ಶಿವಲಿಂಗಂರವರ ದಿ:9.11.2004ರ ಪ್ರತಿರಕ್ಷಣಾ ಹೇಳಿಕೆ.
6) ಪಪೂಶಿಇ ನಿರ್ದೇಶಕರ ದಿ:29.3.2005ರ ಜ್ಞಾಪನಾ ಸಂಖ್ಯೆ ಪಪೂಶಿಇ/ಎಂ.ಎಂ.025/1474/ ಪೋಲೀಸ್ ವರದಿ/ 2003-04.
7) ದಿ.13.5.2005ರ ಪತ್ರ ಸಂಖ್ಯೆ ಇಡಿ 89 ಡಿಜಿಡಿ 2005.
8) ಕರ್ನಾಟಕ ಲೋಕಸೇವಾ ಆಯೋಗದ ದಿ:20.5.2005ರ ಪತ್ರ ಸಂಖ್ಯೆ:ಪಿ.ಎಸ್.ಸಿ. 08 ಸಿಎಸ್‌ಎಸ್ 05

**ಪ್ರಸ್ತಾವನೆ:**

ಶ್ರೀ ಎಸ್.ಶಿವಲಿಂಗಂ, ತಮಿಳು ಭಾಷಾ ಉಪನ್ಯಾಸಕರು, ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, ಬಿ.ಪಿ. ವಾಡಿಯಾ ರಸ್ತೆ ಬಸವನಗುಡಿ ಬೆಂಗಳೂರು, ಇವರು ಈ ಹಿಂದೆ ಕೋಲಾರ ಜಿಲ್ಲೆಯ ಕೆ.ಜಿ.ಎಫ್‌ನ ರಾಬರ್ಟ್‌ಸನ್‌ಪೇಟೆ, ಇಲ್ಲಿನ ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಕಾನೂನು ಬಾಹಿರ ಚಟುವಟಿಕೆಗಳಲ್ಲಿ ಭಾಗಿಯಾಗಿ ಪೋಲೀಸರಿಂದ ದಸ್ತಗಿರಿಗೆ ಒಳಪಟ್ಟು ಕಾರಾಗೃಹ ಬಂಧನಕ್ಕೆ ಒಳಗಾಗಿರುವ ಹಿನ್ನಲೆಯಲ್ಲಿ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುವ ಕಾರಣ, ಪ.ಪೂ.ಶಿ.ಇ ನಿರ್ದೇಶಕರು ಅವರ ವಿರುದ್ಧ ಶಿಸ್ತು ಕ್ರಮ ಬಾಕಿ ಇರಿಸಿ ಕ್ರಮ ಸಂಖ್ಯೆ:1ರಲ್ಲಿ ಓದಲಾದ ದಿ: 22.9.2003ರ ಆದೇಶದಲ್ಲಿ ಸೇವೆಯಿಂದ ಅಮಾನತ್ತು ಗೊಳಿಸಿದ್ದರು, ನಂತರ ದಿ:8.9.2004ರ ಕಾರಣ ಕೇಳುವ ನೋಟೀಸ್ ಮೂಲಕ ಆರೋಪಣಾ ಪಟ್ಟಿಯನ್ನು ಜಾರಿಮಾಡಿ ಅವರ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಿದ್ದರು. ಶ್ರೀ.ಎಸ್. ಶಿವಲಿಂಗಂರವರು ಕ್ರಮಸಂಖ್ಯೆ 3ರಲ್ಲಿ ಓದಲಾದ ದಿ:9.11.2004ರಂದು ಸಲ್ಲಿಸಿದ ಪ್ರತಿರಕ್ಷಣಾ ಹೇಳಿಕೆಯಲ್ಲಿ ಆಪಾದನೆಗಳನ್ನು ನಿರಾಕರಿಸಿರುವ ಕಾರಣ ಆಪಾದನೆಗಳ ಬಗ್ಗೆ ಸತ್ಯಾಸತ್ಯತೆಗಳನ್ನು ತಿಳಿಯಲು ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ನಿರ್ದೇಶಕರು ದಿ:14.1.2004ರ ಆದೇಶದಲ್ಲಿ ಶ್ರೀ.ಸಿ.ರೆಡ್ಡಪ್ಪ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಯಲಹಂಕ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಕೋರಿದ್ದರು. ವಿಚಾರಣಾಧಿಕಾರಿಗಳು ನಿಯಮಗಳ ಪ್ರಕಾರ ವಿಚಾರಣೆಯನ್ನು ನಡೆಸಿ ದಿ:16.8.2004 ರಂದು ಸಲ್ಲಿಸಿದ ವರದಿಯಲ್ಲಿ ಶ್ರೀ ಶಿವಲಿಂಗಂರವರು ತಾನು ಇಲಾಖಾ ಅಥವಾ ಸರ್ಕಾರದ ಪೂರ್ವಾನುಮತಿ ಪಡೆಯದೆ ಕರ್ನಾಟಕ ವಿಮೋಚನಾ ರಂಗದ ಪ್ರಧಾನ ಕಾರ್ಯದರ್ಶಿಯಾಗಿ ಕರ್ತವ್ಯನಿರ್ವಹಿಸುತ್ತಿರುವುದು ನಿಜವೆಂದು ಹಾಗೂ ಆರೋಪಣಾ ಪಟ್ಟಿಯಲ್ಲಿ ಸೂಚಿಸಿರುವಂತೆ ಆಂಡರ್‌ಸನ್‌ಪೇಟ್ ಪೋಲೀಸ್ ಠಾಣೆಯಲ್ಲಿ ಮೊಕದ್ದಮೆ ದಾಖಲಾಗಿರುವುದು ನಿಜ. ಈ ಮೊಕದ್ದಮೆಗೆ ಸಂಬಂಧಿಸಿದಂತೆ ದಸ್ತಗಿರಿಯಾಗಿದ್ದು 23 ದಿನಗಳು ನ್ಯಾಯಾಂಗ ಬಂಧನದಲ್ಲಿದ್ದು, ನಂತರ ಜಾಮೀನಿನ ಮೇಲೆ ಬಿಡುಗಡೆ ಹೊಂದಿರುವುದಾಗಿ ಒಪ್ಪಿಕೊಂಡಿರುತ್ತಾರೆ. ಈ ಆರೋಪಿಯು ಈ ಹಿಂದೆ ವಿವಿಧ ಮೊಕದ್ದಮೆಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಗೆ ಒಳಪಟ್ಟು ಇಲಾಖೆಯು, ಸದರಿ ಆರೋಪಿಗೆ ಎಚ್ಚರಿಕೆ ನೀಡಿ ಶಿಕ್ಷೆ ವಿಧಿಸಿದೆ. ಅಲ್ಲದೆ ಇವರು ಇಲಾಖೆ:ಸರ್ಕಾರದ ಅನುಮತಿ ಪಡೆಯದೇ ಯಾವುದೇ ಸಂಘ ಸಂಸ್ಥೆಗಳ ಚಟುವಟಿಕೆಗಳಲ್ಲಿ ಭಾಗವಹಿಸುವಂತಿಲ್ಲವೆಂದು ತಿಳಿಸಿದ್ದರೂ ಸಹ ಇದನ್ನು ಕಡೆಗಣಿಸಿ ಕೆವಿಆರ್ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಯಾಗಿ ನಿಯಮಬಾಹಿರ ಚಟುವಟಿಕೆಗಳಲ್ಲಿ ಭಾಗವಹಿಸಿ ಇಲಾಖೆಗೆ ಮತ್ತು ಸರ್ಕಾರದ ನಿಯಮಗಳನ್ನು ಉಲ್ಲಂಘಿಸುವ ಆರೋಪವು ಸಾಬೀತಾಗಿದೆ ಎಂದು ತಿಳಿಸಿದ್ದಾರೆ. ಸರ್ಕಾರವು ಈ ವರದಿಯನ್ನು ಸಮಗ್ರವಾಗಿ ಪರಿಶೀಲಿಸಿ ಶ್ರೀ ಶಿವಲಿಂಗಂ ಅವರಿಗೆ ದಿ:14.10.2004 ರಂದು ವಿಚಾರಣಾ ವರದಿಯನ್ನು ಜಾರಿ ಮಾಡಿ ವಿಚಾರಣಾ ವರದಿಯಲ್ಲಿನ ಅಂಶಗಳ ಬಗ್ಗೆ ಅವರ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಿದ್ದರು.

ಶ್ರೀ.ಎಸ್.ಶಿವಲಿಂಗಂ ಅವರು, 9.11.2004ರಂದು ಸಲ್ಲಿಸಿದ ರಕ್ಷಣಾ ಹೇಳಿಕೆಯಲ್ಲಿ ತನ್ನ ಮೇಲಿನ ಆರೋಪಗಳನ್ನು ಅವರೇ ಒಪ್ಪಿಕೊಂಡು ಆರೋಪಗಳನ್ನು ಆರೋಪವೇ ಅಲ್ಲ ಎಂದು ಪ್ರತಿವಾದಿಸಿದ್ದಾರೆ. ವಿಚಾರಣಾಧಿಕಾರಿಗಳ ವಿರುದ್ಧ ಆರೋಪಮಾಡಿ, ಬೇರೆ ವಿಚಾರಣಾಧಿಕಾರಿಯನ್ನು ನೇಮಿಸಿ ವಿಚಾರಣೆ ನಡೆಸಲು ವಿನಂತಿಸಿರುತ್ತಾರೆ. ಇವರು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯನ್ನು

ಪರಿಶೀಲಿಸಿದ ನಂತರ ಸರ್ಕಾರವು ಇಂತಹ ರಾಜಕೀಯ ಚಟುವಟಿಕೆಗಳಲ್ಲಿ ಪಾಲ್ಗೊಂಡ ಹಾಗೂ ಹಿಂಸಾತ್ಮಕ ಪ್ರಕರಣಗಳಲ್ಲಿ ದಾಖಲಾಗಿರುವ ಚಟುವಟಿಕೆಯ ಪ್ರವೃತ್ತಿವುಳ್ಳ ನೌಕರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲು ತೀರ್ಮಾನಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು.

ಈ ಮಧ್ಯದಲ್ಲಿ ಕ್ರ.ಸಂ.6ರಲ್ಲಿ ಓದಲಾದ ದಿ:29.03.2005ರಂದು ಪದವಿ ಪೂರ್ವ ಶಿಕ್ಷಣ ನಿರ್ದೇಶಕರಿಂದ ಹೊರಡಿಸಿದ ಜ್ಞಾಪನದಲ್ಲಿ ಶ್ರೀಯುತರಿಗೆ ವಿಚಾರಣೆ ಕಾಯ್ದಿರಿಸಿ, ಸರ್ಕಾರಿ ಪದವಿ ಪೂರ್ವ ಕಾಲೇಜು, ಬಿ.ಪಿ.ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿತ್ತು.

ಕರ್ನಾಟಕ ಲೋಕಸೇವಾ ಆಯೋಗವು ದಿ:20.5.2005ರ ಪತ್ರದಲ್ಲಿ ಆಪಾದಿತ ನೌಕರರ ತಾನು ಸರ್ಕಾರಿ ನೌಕರರೆಂಬುದನ್ನು ಮರೆತು ಸರ್ಕಾರಿ ನೌಕರರಿಗೆ ತರವಲ್ಲದ ನಡುವಳಿಕೆಯಲ್ಲಿ ತೊಡಗಿ ಗುಂಪುಗಾರಿಕೆಯಲ್ಲಿ ನಿಸ್ಸೀಮತನವನ್ನು ಪ್ರದರ್ಶಿಸಿದ್ದು, ಇವರ ಮೇಲಿನ ಎಲ್ಲಾ ಆಪಾದನೆಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿವೆ ಆದ್ದರಿಂದ ಇವರನ್ನು ಕಡ್ಡಾಯ ನಿವೃತ್ತಿಗೊಳಿಸುವ ಬದಲು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿದೆ.

ಕರ್ನಾಟಕ ಲೋಕಸೇವಾ ಆಯೋಗದ ಅಭಿಪ್ರಾಯವನ್ನು ಇಲಾಖಾ ವಿಚಾರಣೆಯ ವರದಿಯೊಂದಿಗೆ ಸಮಗ್ರವಾಗಿ ಪರಿಶೀಲಿಸಿದ ನಂತರ ಶ್ರೀ.ಎಸ್. ಶಿವಲಿಂಗಂ ಇವರನ್ನು ಕಡ್ಡಾಯ ನಿವೃತ್ತಿಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿ ಸರ್ಕಾರ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶಸಂಖ್ಯೆ: ಇಡಿ 89 ಡಿಜಿಡಿ 2004 ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಶ್ರೀ.ಎಸ್.ಶಿವಲಿಂಗಂ, ತಮಿಳು ಭಾಷಾ ಉಪನ್ಯಾಸಕರು, ಬಾಲಕಿಯರ ಸರ್ಕಾರಿ ಪದವಿಪೂರ್ವ ಕಾಲೇಜು, ಬಿ.ಪಿ.ವಾಡಿಯ ರಸ್ತೆ, ಬಸವನಗುಡಿ, ಬೆಂಗಳೂರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ(ಸಿಸಿಎ)ನಿಯಮಾವಳಿಗಳು 1957ರ ನಿಯಮ 8(vi)ರ ಮೇರೆಗೆ ಕಡ್ಡಾಯ ನಿವೃತ್ತಿಗೊಳಿಸಿ ಆದೇಶಿಸಿದೆ. ಸದರಿಯವರು ಅಮಾನತ್ತಿನಲ್ಲಿ ಕಳೆದ ಅವದಿಯನ್ನು ಅಮಾನತ್ತಿನ ಅವಧಿಯೆಂದೇ ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರೆ**

ಪಿ.ಆರ್. 60 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಸಂಪತ್ ಕುಮಾರ್ ಹಿಂದಿನ ತಹಶೀಲ್ದಾರ್ ಕುಣಿಗಲ್ ತಾಲ್ಲೂಕ್ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** 1) ಮೈಸೂರು ಜಿಲ್ಲಾಧಿಕಾರಿಗಳ ಪ.ಸಂ: ಎಲ್ಎನ್‌ಡಿ (ಟಿಎಂಕೆ):ಸಿಆರ್:16/96-97 ದಿನಾಂಕ: 14-06-2004

2) ದಿ:17-09-2004ರ ತಿಳುವಳಿಕೆ ಪ.ಸಂ:ಕಂಇ:24:ಎಡಿಇ:2004.

**ಪ್ರಸ್ತಾವನೆ:**

ಶ್ರೀ ಸಂಪತ್ ಕುಮಾರ್,ಇವರು ಈ ಹಿಂದೆ ಕುಣಿಗಲ್ ತಾಲ್ಲೂಕು ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ಶ್ರೀ ವೈ.ಸಿ.ನಂಜುಂಡಯ್ಯ ಬಿನ್ ಲೇಟ್ ಚನ್ನೇಗೌಡ ಇವರು ಕುಣಿಗಲ್ ತಹಶೀಲ್ದಾರ್ ವಿರುದ್ಧ ಲೋಕಾಯುಕ್ತರಲ್ಲಿ ಸಲ್ಲಿಸಿರುವ ದೂರರ್ಜಿಗೆ ಸಂಬಂಧಿಸಿದಂತೆ ಕೃಷಿ ನಿರ್ದೇಶಕರು, ಬೆಂಗಳೂರು ಇವರ ನಿರ್ದೇಶನದಂತೆ ತೆಗೆದುಕೊಂಡಿರುವ ಕ್ರಮದ ಬಗ್ಗೆ ಹಲವಾರು ಬಾರಿ ಸೂಚಿಸಿದರೂ ಸಹ ತುಮಕೂರು ಜಿಲ್ಲಾಧಿಕಾರಿಗಳಿಗೆ ಸಕಾಲದಲ್ಲಿ ವರದಿ ಸಲ್ಲಿಸದೆ,ವಿಳಂಬ ದೋರಣೆ ತಾಳಿದ್ದರಿಂದ ಲೋಕಾಯುಕ್ತಕ್ಕೆ ವರದಿ ಸಲ್ಲಿಸಲು ವಿಳಂಬವಾಗಿದ್ದಕ್ಕೆ ಕಾರಣರಾಗಿ ಕರ್ತವ್ಯಲೋಪ ಎಸಗಿದ ಕಾರಣ ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ(1)ರ ದಿ:14-06-2004ರ ಪತ್ರದಲ್ಲಿ ತುಮಕೂರು ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ಆರೋಪ ಪಟ್ಟಿಗಳನ್ನು (ಅನುಬಂಧ 1ರಿಂದ 4ರವರೆಗೆ) ಜಾರಿ ಮಾಡಿ ಸದರಿ ಅರೋಪಗಳ ಬಗ್ಗೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ತಿಳುವಳಿಕೆ ಪತ್ರಕ್ಕೆ ಶ್ರೀ ಕೆ.ಸಂಪತ್ ಕುಮಾರ್ ರವರ 1 ವರ್ಷ ಕಳೆದರೂ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ

ಅದ್ದರಿಂದ ಸರ್ಕಾರವು ಸ್ವಯಂ ಪ್ರೇರಣೆಯಿಂದ ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರದ ಅದೇಶ ಸಂಖ್ಯೆ:ಅರ್‌ಡಿ:24:ಎಡಿಇ:2004,ಬೆಂಗಳೂರು,ದಿನಾಂಕ: 27ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸಂಪತ್‌ಕುಮಾರ್, ಹಿಂದಿನ ತಹಶೀಲ್ದಾರ್,ಕುಣಿಗಲ್ ತಾಲ್ಲೂಕು ಇವರ ವಿರುದ್ಧದ ಅರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎನ್.ಎಸ್. ಸಂಗೋಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನಾಯಾಧೀಶರು,ನಂ415/2, F ಬ್ಲಾಕ್, ಸಹಕಾರ ನಗರ ಬೆಂಗಳೂರು-560092 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತುಮಕೂರು ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯ ಅವರಣದಲ್ಲಿ ಅಥವಾ ಅವರು ಗುರುತಿಸಿ ನಿಗಧಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000 (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ:45:ಸೇಇವಿ:2001ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ತುಮಕೂರು ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಂ. ವೀರಯ್ಯ**

ಪಿ.ಆರ್. 104

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಕಂದಾಯ ಇಲಾಖೆ(ಸೇವೆಗಳು-3).

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ತುಮಕೂರಿನ ಬಯೋಮಾಸ್ ಎನರ್ಜಿ ಫಾರ್ ರೂರಲ್ ಇಂಡಿಯಾ ಪ್ರಾಜೆಕ್ಟ್ ಇಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯಾಗಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ.ಎಲ್.ರಾಘವೇಂದ್ರ ಇವರ ನಿಯೋಜನಾ ಷರತ್ತು ಮತ್ತು ನಿಬಂಧನೆಗಳು.

**ಓದಲಾಗಿದೆ:** ಸರ್ಕಾರದ ಅಧಿಸೂಚನೆ ಸಂ: ಅಪಜೀ 117 ಅಪಸೇ 2005, ದಿನಾಂಕ: 06/06/2005.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 255 ಅಪಸೇ 2005, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ ಅಪಜೀ 117 ಅಅಸೇ 2005, ದಿನಾಂಕ: 06/06/2005 ರಲ್ಲಿ ತುಮಕೂರಿನ ಬಯೋಮಾಸ್ ಎನರ್ಜಿ ಫಾರ್ ರೂರಲ್ ಇಂಡಿಯಾ ಪ್ರಾಜೆಕ್ಟ್ ಇಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ಶ್ರೀ ಕೆ.ಎಲ್.ರಾಘವೇಂದ್ರ ಇವರನ್ನು ಪ್ರತಿ ನಿಯೋಜಿಸಲು ಮಂಜೂರಾತಿ ನೀಡಲಾಗಿದೆ.

ಶ್ರೀ ಕೆ.ಎಲ್. ರಾಘವೇಂದ್ರ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರ ನಿಯೋಜನಾ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತೆ ಇರುತ್ತದೆ.

(1) **ನಿಯೋಜನೆಯ ಅವಧಿ:** ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯು ಅವರ ಮಾತೃ ಇಲಾಖೆಯಿಂದ ಬಿಡುಗಡೆ ಹೊಂದಿದ / ಅನ್ಯಸೇವಾ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳವರೆಗೆ ಅಂದರೆ ದಿನಾಂಕ: 17/06/2007 ರವರೆಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ಇರತಕ್ಕದ್ದು.

(2) **ಅನ್ಯ ಸೇವೆಯ ಮೇಲಿನ ನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿ:** ಅನ್ಯ ಸೇವೆಯ ಮೇಲಿನ ನಿಯೋಜನೆಯ ಅವಧಿಯು ದಿನಾಂಕ 17/06/2005 ರಂದು ತುಮಕೂರಿನ ಬಯೋಮಾಸ್ ಎನರ್ಜಿ ಫಾರ್ ರೂರಲ್ ಇಂಡಿಯಾ ಪ್ರಾಜೆಕ್ಟ್ ಇಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಗೆ ಶ್ರೀ ಕೆ.ಎಲ್.ರಾಘವೇಂದ್ರ ಇಲ್ಲಿಯ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹುದ್ದೆಯ ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಪ್ರಾರಂಭವಾಗುವುದು ಮತ್ತು ದಿನಾಂಕ: 17/06/2007 ರಂದು ಅಥವಾ ಅನ್ಯ ಹುದ್ದೆಯ ಕಾರ್ಯಭಾರ ವಹಿಸಿಕೊಂಡ ದಿನಾಂಕದಂದು ಮುಕ್ತಾಯಗೊಳ್ಳುವುದು.

(3) **ವೇತನ:** ಅನ್ಯ ಸೇವೆಯ ಮೇಲಿನ ನಿಯೋಜನೆಯ ಅವಧಿಯಲ್ಲಿ ಅವರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ವೇತನವನ್ನು ಮತ್ತು 200.00 ರೂಪಾಯಿ (ಎರಡು ನೂರು ರೂಪಾಯಿಗಳು) ಗಳ ಗರಿಷ್ಟ ಮಿತಿಗೊಳಪಟ್ಟು ಆ ವೇತನ ಶ್ರೇಣಿಯ ಸರಾಸರಿ ಶೇಕಡಾ 5 ರ ದರದಲ್ಲಿ ಅನ್ಯಸೇವಾ ಭತ್ಯೆಯನ್ನು ಪಡೆಯುತ್ತಾರೆ.

(4) **ತುಟ್ಟಿಭತ್ಯೆ : ಮನೆ ಬಾಡಿಗೆ ಭತ್ಯೆ : ನಗರ ಪರಿಹಾರ ಭತ್ಯೆ:** ತುಟ್ಟಿ ಭತ್ಯೆ, ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಯು ಪಾವತಿಯು ರಾಜ್ಯ ಸರ್ಕಾರದ ನಿಯಮಗಳಡಿಯಲ್ಲಿ ಕ್ರಮಗೊಳಿಸುವುದು.

(5) **ಸೇರುವ ಕಾಲ, ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣ ಭತ್ಯೆ:** ಇವುಗಳನ್ನು ಅನ್ಯಸೇವೆಯ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರದ ನಿಯಮಗಳ : ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು ಮತ್ತು ಇವುಗಳನ್ನು ಅನ್ಯ ನಿಯೋಜಕರು ಪಾವತಿ ಮಾಡತಕ್ಕದ್ದು.

(6) **ಪ್ರಯಾಣ ಭತ್ಯೆ:** ಅನ್ಯ ಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಅನ್ಯ ನಿಯೋಜಕರಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಸರ್ಕಾರಿ ನೌಕರರು ಅರ್ಹರಾಗಿರುತ್ತಾರೆ.

(7) **ರಜೆ ನಿಯಮಗಳು:** ರಾಜ್ಯ ಸರ್ಕಾರದಲ್ಲಿ ಅವರಿಗೆ ಅನ್ವಯವಾಗುವ ರಜೆ ನಿಯಮಗಳಿಗೆ ಒಳಪಟ್ಟಿರುತ್ತಾರೆ.

**(8) ರಜೆ ಪ್ರಯಾಣ ರಿಯಾಯಿತಿ:** ರಾಜ್ಯ ಸರ್ಕಾರದಲ್ಲಿನ ಸಂಬಂಧಿತ ನಿಯಮಗಳನುಸಾರ ಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಸರ್ಕಾರಿ ನೌಕರರು ಅರ್ಹರಾಗಿರುತ್ತಾರೆ.

(9) ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ಅನುಬಂಧ "ಸಿ" ಯಲ್ಲಿರುವ ನಿಯಮಗಳ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಸರ್ಕಾರಿ ನೌಕರರು ಅರ್ಹರಿರುತ್ತಾರೆ.

**(10) ವೈದ್ಯಕೀಯ ರಿಯಾಯಿತಿಗಳು:** 1963 ರ ಕರ್ನಾಟಕ ಸರ್ಕಾರಿ ನೌಕರರ ವೈದ್ಯಕೀಯ ಉಪಚಾರ ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆ ಇಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಸರ್ಕಾರಿ ನೌಕರರು ಅರ್ಹರಾಗಿರುತ್ತಾರೆ. ಮತ್ತು ಅದರ ಬಾಬ್ತಿನ ವೆಚ್ಚವನ್ನು ಅನ್ಯ ನಿಯೋಜಕರೇ ಭರಿಸತಕ್ಕದ್ದು.

(11) **ದುರ್ಬಲತೆ ರಜೆ:** ಅನ್ಯ ನಿಯೋಜಕರ ಬಳಿ ಸೇವೆಯಲ್ಲಿರುವಾಗ ಮತ್ತು ಅಥವಾ ಸೇವೆಯ ಮೂಲಕ ಸಂಬಂಧಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆ, ಇಂತಹ ದುರ್ಬಲತೆಯು ಅನ್ಯ ನಿಯೋಜಕರ ಬಳಿಯಲ್ಲಿನ ಸೇವೆಯು ಕೊನೆಗೊಂಡ ನಂತರ ಕಂಡು ಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ನಿಯೋಜಕರು ಬದ್ಧರಾಗಿರುತ್ತಾರೆ.

(12) **ರಜಾ ವೇತನ ಮತ್ತು ನಿವೃತ್ತಿ ವೇತನ ಅಂಶದಾನ:** (ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಅನ್ಯ ನಿಯೋಜಕರು ಈ ಮುಂದಿನ ದರಗಳಲ್ಲಿ ಪಾವತಿ ಮಾಡತಕ್ಕದ್ದು.

| | | |
|---|---|---|
| (1) | ರಜೆ ವೇತನ ಅಂಶದಾನ | ಅನ್ಯ ಸೇವೆಯ ಅವಧಿಯಲ್ಲಿ ಅನ್ಯ ಸೇವಾ ಭತ್ಯೆಯೂ ಸೇರಿದಂತೆ ಪಡೆಯುವ ಸಂಬಳದ ಶೇಕಡಾ 11 ರಷ್ಟು. |
| (2) | ನಿವೃತ್ತಿ ವೇತನ ಅಂಶದಾನ | ಕಾಲಕಾಲಕ್ಕೆ ಪಡೆಯುವ ವೇತನ ಎಂಟನೇ ಒಂದು ಭಾಗ ಈ ಉದ್ದೇಶಕ್ಕೆ "ವೇತನ" ಎಂದರೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 37 ಎಸ್‌ಆರ್‌ಎಸ್ 87, ದಿನಾಂಕ: 11–2–98 ರಲ್ಲಿ ವಿವರಿಸಲಾದ ವೇತನ ಎಂದು ಅರ್ಥ. |

(ಆ) ಅನ್ಯ ನಿಯೋಜಕರು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯ ಸೇವೆಯು ಮುಗಿದು ಹೋದಂದಿನಿಂದ ರಜೆ ವೇತನ ಮತ್ತು ನಿವೃತ್ತಿ ಅಂಶದಾನವನ್ನು ಪಾವತಿ ಮಾಡತಕ್ಕದ್ದು . ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಸಂದಾಯ ಮಾಡತಕ್ಕದ್ದು.

**(ಆ) ರಜೆ ವೇತನ ಅಂಶದಾನ:**

| | | |
|---|---|---|
| (ಅ) | ಕೃತ್ಯ ಸಂಬಂಧದ ಜಮೆ ಶೀರ್ಷಿಕೆ (ಫಂಕ್ಷನಲ್ ರೆಸಿಪ್ಟ್ ಹೆಡ್) | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ ಸಂಬಂಧದ ಜಮೆ ಶೀರ್ಷಿಕೆ 800– ಇತರೆ ಜಮೆಗಳು–ರಜೆ ವೇತನ ಅಂಶದಾನ. |
| (ಆ) | ಸರಿಹೊಂದುವ ಜಮೆ ಶೀರ್ಷಿಕೆ ಇಲ್ಲದೇ ಹೋದಲ್ಲಿ<br>(i) "ಸಾಮಾನ್ಯ ಸೇವೆಗಳು" ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ.<br>(ii) "ಸಾಮಾನ್ಯ ಮತ್ತು ಸಾಮುದಾಯಿಕ ಸೇವೆಗಳು" ಇದರ ಪ್ರಕರಣದಲ್ಲಿ.<br>(iii) "ಆರ್ಥಿಕ ಸೇವೆಗಳು" ಅದರ ಅಡಿಯಲ್ಲಿ ಬರುವ ಇಲಾಖೆ | <br><br>0075 ಇತರೆ ಸಾಮಾನ್ಯ ಸೇವೆಗಳು–800 ಇತರೆ ಜಮೆಗಳು–ರಜೆ ವೇತನ ಅಂಶದಾನ<br>0250 ಇತರೆ ಸಾಮಾಜಿಕ ಸೇವೆಗಳು–800–ಇತರೆ ಜಮೆಗಳು – ರಜೆ ವೇತನ ಅಂಶದಾನ<br>1475 –ಇತರೆ ಸಾಮಾನ್ಯ ಆರ್ಥಿಕ ಸೇವೆಗಳು 800–ಇತರೆ ಜಮೆಗಳು–ರಜೆ ವೇತನ ಅಂಶದಾನ. |
| (ಆ) | ನಿವೃತ್ತಿ ವೇತನ ಅಂಶದಾನ | 0071 ನಿವೃತ್ತಿ ವೇತನ ಮತ್ತು ಇತರೆ ನಿವೃತ್ತಿ ಸೌಲಭ್ಯಗಳ ಬಗ್ಗೆ ಅಂಶದಾನ ಮತ್ತು ವಸೂಲುಗಳು 101–ಚಂದಾ ಮತ್ತು ಅಂಶದಾನಗಳು–08–ನಿವೃತ್ತಿ ವೇತನ ವೆಚ್ಚ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶ ಅಥವಾ–0–ನಿವೃತ್ತಿ ವೇತನದ ವೆಚ್ಚದ ಸಲುವಾಗಿ ಸಂಸ್ಥೆಗಳಿಂದ ವಸೂಲು ಮಾಡಿದ ಅಂಶದಾನ. |

(ಇ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಮಾಡದಿದ್ದರೆ ಸರ್ಕಾರವು ವಿಶೇಷವಾಗಿ ವಿನಾಯತಿ ತೋರಿಸಿದ ಹೊರತು, ಪಾವತಿ ಮಾಡದಿರುವ ಅಂಶದ ಮೇಲೆ ಮೇಲಿನ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಂಶದಾನವನ್ನು ಅಂತಿಮವಾಗಿ ಪಾವತಿ ಮಾಡುವ ದಿನಾಂಕದವರೆಗೆ ಪ್ರತಿ 100 ರೂಪಾಯಿಗಳಿಗೆ ದಿನಂಪ್ರತಿ 2 ಪೈಸೆ ದರದಲ್ಲಿ ಬಡ್ಡಿಯನ್ನು ಅನ್ಯ ನಿಯೋಜಕರು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು .

(13) **ರಾಜ್ಯ ಸರ್ಕಾರಿ ನೌಕರರು ಸಾಮೂಹಿಕ ವಿಮಾ ಯೋಜನೆ:** ರಾಜ್ಯ ಸರ್ಕಾರಿ ನೌಕರರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಗೆಯನ್ನು ಪ್ರತಿ ನಿಯೋಜಿತ ನೌಕರರ ವೇತನದಿಂದ ವಸೂಲು ಮಾಡುವುದು ಮತ್ತು ಅನುಬಂಧ 'ಎ' ದಲ್ಲಿನ ಅನುಸೂಚಿಯೊಂದಿಗೆ ಮಹಾಲೇಖಪಾಲರು, ಬೆಂಗಳೂರು ಇವರಿಗೆ ಕ್ರಾಸ್ ಮಾಡಿದ ಚೆಕ್ : ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕ ಶೀರ್ಷಿಕೆಗೆ ಜಮೆ ಮಾಡಲು ಕಳುಹಿಸಿಕೊಡುವುದು ಅನ್ಯ ನಿಯೋಜಕರ ಹೊಣೆಗಾರಿಕೆಯಾಗಿರತಕ್ಕದ್ದು.

(14) **ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ವಿಮಾ ಪತ್ರ:** ಸಾಮಾನ್ಯ ಭವಿಷ್ಯ ನಿಧಿಗೆ ಚಂದಾ : ಅನ್ಯ ಸೇವೆಯ ಮೇಲೆ ನಿಯೋಜನೆಗೆ ಹೋಗುವ ಸಮಯದಲ್ಲಿ ಕೆ.ಜಿ.ಐ.ಡಿ.ನಿಯಮ, ಜಿ.ಪಿ.ಎಫ್. ನಿಯಮಗಳ ಪ್ರಕಾರ ಚಂದಾ ನೀಡುತ್ತಿದ್ದ ಕೆ.ಜಿ.ಐ.ಡಿ. ಮತ್ತು ಜಿ.ಪಿ.ಎಫ್.ನಲ್ಲಿನ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಸರ್ಕಾರಿ ನೌಕರರು ಮುಂದುವರಿಸುತ್ತಾರೆ. ಸರ್ಕಾರಿ ನೌಕರರ ಸಂಬಳದಿಂದ ಚಂದಾಗಳನ್ನು ವಸೂಲು ಮಾಡತಕ್ಕದ್ದು ಮತ್ತು ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಜಮಾ ಮಾಡತಕ್ಕದ್ದು.

| | | |
|---|---|---|
| ಸಾಮಾನ್ಯ ಭವಿಷ್ಯ ನಿಧಿ | : | 8005–ರಾಜ್ಯ ಭವಿಷ್ಯ ನಿಧಿ |
| ಕರ್ನಾಟಕ ಸರ್ಕಾರಿ ವಿಮಾ ಇಲಾಖೆ | : | 8011–ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು 1 ವಿಮೆ ನಿಧಿಗಳು. |

(15) ಸರ್ಕಾರಿ ಕಂಪೆನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ಪ್ರತಿ ನಿಯೋಜನೆಗಾಗಿ ಮಾಸಿಕ ರೂ 2500–00 ಗಳಿಗೆ ಮೀರದಂತೆ ಸಂಬಳವನ್ನು ಪಡೆಯುತ್ತಿರುವ ಸರ್ಕಾರಿ ನೌಕರನಿಗೆ ಉದ್ದಿಮೆಯ 1965 ರ ಬೋನಸ್ ಸಂದಾಯ ಅಧಿನಿಯಮದ ಪ್ರಕಾರ ಬೋನಸ್ ಘೋಷಿಸಿದ್ದಲ್ಲಿ ಅಥವಾ 1965 ರ ಬೋನಸ್ ಸಂದಾಯ ಅಧಿನಿಯಮದ ತತ್ವಗಳ ಪ್ರಕಾರ ಅನುಗ್ರಹದ ಕೊಡುಗೆಯನ್ನು ನೀಡಿದ್ದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.

**(16) ನಿಯೋಜಕ ನೌಕರರಿಗೆ ಮುಂಬಡ್ತಿ:** ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯಗಳನ್ನು ಒದಗಿಸುವುದು, ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 88

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ. (ಸೇವೆಗಳು)

## ಕಂದಾಯ ಸಚಿವಾಲಯ

**ವಿಷಯ:** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಕಂಇ 37 ಇಎಫ್ಎಸ್ 94, ದಿನಾಂಕ:17–09–1996.
2) ಸರ್ಕಾರದ ಆದೇಶ ಸಂಖ್ಯೆ:ಕಂಇ 42 ಮುನೊಸೊ 2003, ದಿನಾಂಕ:18–12–2004.
3) ಆಡಳಿತಾಧಿಕಾರಿಗಳು, ಸೆಂಟ್ರಲ್ ಎಜುಕೇಷನ್ ಸೊಸೈಟಿ (ರಿ), ಊರ್ಡಿಗೆರೆ ಇವರ ಪತ್ರ ಸಂಖ್ಯೆ:ಎ.ಸಿ.ಪಿ.ಎಅ/31/96–97/03/05–06, ದಿನಾಂಕ:10–10–2005.

**ಪ್ರಸ್ತಾವನೆ:**

ಮೇಲೆ ಓದಲಾದ–1 ರ ಸರ್ಕಾರಿ ಆದೇಶದಲ್ಲಿ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು, ಈ ಸಂಸ್ಥೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಉಪ ವಿಭಾಗಾಧಿಕಾರಿಗಳು, ತುಮಕೂರು ಉಪ ವಿಭಾಗ ಇವರನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ–27 ಎ ರನ್ವಯ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗುತ್ತಿದ್ದು, ಮೇಲೆ –2 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯು ದಿನಾಂಕ:17–09–2005 ಕ್ಕೆ ಮುಕ್ತಾಯಗೊಂಡಿರುತ್ತದೆ.

ಮೇಲೆ ಓದಲಾದ–3ರ ಪತ್ರದಲ್ಲಿ ಆಡಳಿತಾಧಿಕಾರಿಯವರು ತುಮಕೂರು ಸಿವಿಲ್ ನ್ಯಾಯಾಲಯದಲ್ಲಿ ಹೂಡಲಾಗಿರುವ ದಾವೆಯು ಇನ್ನು ಇತ್ಯರ್ಥವಾಗಿರುವುದಿಲ್ಲ. ಸಂಸ್ಥೆಯ ಸದಸ್ಯರುಗಳು ಸಂಸ್ಥೆಯ ಚಟುವಟಿಕೆಗಳ ಬಗ್ಗೆ ಆಸಕ್ತಿವಹಿಸಿರುವುದಿಲ್ಲವಾದ್ದರಿಂದ ಸಂಸ್ಥೆಗೆ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲ. ಸಂಸ್ಥೆಯ, ವಿದ್ಯಾರ್ಥಿಗಳ, ಶಿಕ್ಷಕರ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ದಿನಾಂಕ: 18–09–2005 ರಿಂದ ಮುಂದಿನ 6 ತಿಂಗಳ ಅವಧಿಗೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸುವಂತೆ ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ವರದಿಯನ್ನು ಸರ್ಕಾರವು ಪರಿಶೀಲಿಸಿದ್ದು, ಸದರಿಯವರ ವರದಿಯನ್ವಯ ದಿನಾಂಕ:18–09–2005 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 42 ಮುನೊಸೊ 2003, ಬೆಂಗಳೂರು, ದಿನಾಂಕ:22ನೇ ಡಿಸೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಕಲಂ 27ಎ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು, ಈ ಸಂಸ್ಥೆಗೆ ನೇಮಿಸಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ:18–09–2005 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ ವಿಸ್ತರಿಸಿದ ಅವಧಿಯೊಳಗೆ ಪ್ರಾಮಾಣಿಕ ಪ್ರಯತ್ನ ಮಾಡಿ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 128

**ಕೆ. ಜಯಚಂದ್ರ**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಬಿಜಾಪುರ ಜಿಲ್ಲೆಯ ನೋಂದಣಿ ಕಛೇರಿ ಮತ್ತು ಉಪ ನೋಂದಣಿ ಕಛೇರಿಗಳಿಗಾಗಿ ಕರ್ನಾಟಕ ಗೃಹ ಮಂಡಳಿಯವರು ಮಾರಾಟ ಮಾಡುವ ಕಟ್ಟಡಗಳನ್ನು ರೂ. 92.00 ಲಕ್ಷಗಳಲ್ಲಿ ಖರೀದಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ ತಿದ್ದುಪಡಿ ಆದೇಶ

**ಓದಲಾಗಿದೆ:**
1) ಬಿಜಾಪುರ ಜಿಲ್ಲಾ ನೋಂದಣಾಧಿಕಾರಿಗಳ ಪತ್ರ ಸಂಖ್ಯೆ: ಜಿನೊವಿ.ಕಟ್ಟಡ 1:04–05, ದಿನಾಂಕ: 5.6.2004
2) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರ ಪತ್ರ ಸಂಖ್ಯೆ: ಬಿಎಲ್‌ಡಿ 6/2001–02, ದಿನಾಂಕ:4.5.2005/23.7.2005.
3) ಸರ್ಕಾರಿ ಆದೇಶ ಸಂಖ್ಯೆ: ಕಂಇ 487 ಮುನೋಮು 2005, ದಿನಾಂಕ:6.12.2005
4) ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಬಿಎಲ್‌ಡಿ–6/01–02, ದಿನಾಂಕ: 26.12.2005.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲಾ ನೋಂದಣಾಧಿಕಾರಿಗಳು ಮೇಲೆ (1) ರಲ್ಲಿ ಓದಲಾದ ದಿನಾಂಕ: 5.6.2004 ರಂದು ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರಿಗೆ ಸಲ್ಲಿಸಿರುವ ಪತ್ರದಲ್ಲಿ ಬಿಜಾಪುರ ಜಿಲ್ಲಾ ನೋಂದಣಿ ಕಛೇರಿ ಮತ್ತು ಉಪ ನೋಂದಣಿ ಅಧಿಕಾರಿಗಳ ಕಾರ್ಯಾಲಯಗಳನ್ನು ನಡೆಸಲು ಈಗ ಹಾಲಿ ಇರುವ ಕಟ್ಟಡಗಳು ಸುವ್ಯವಸ್ಥಿತವಾಗಿಲ್ಲದೇ ಸಾರ್ವಜನಿಕರಿಗೆ ತುಂಬ ಅನಾನುಕೂಲವಾಗಿರುವುದರಿಂದ, ಎರಡು ಕಛೇರಿಗಳನ್ನು ಕರ್ನಾಟಕ ಗೃಹ ನಿರ್ಮಾಣ ಮಂಡಳಿಯ ನೂತನ ವಾಣಿಜ್ಯ ಸಂಕೀರ್ಣದಲ್ಲಿರುವ ಕಛೇರಿಗೆ ಸೀಮಿತವಾದ ಬ್ಲಾಕ್‌ನಲ್ಲಿ ನಡೆಸಲು ಉದ್ದೇಶಿಸಿ, ಸದರಿ ಎರಡು ಕಟ್ಟಡಗಳನ್ನು ಖರೀದಿಸಲು ಇಚ್ಛಿಸಿದ್ದು, ಅದರ ಬಗ್ಗೆ ಅನುಮೋದನೆ ಕೋರಿರುತ್ತಾರೆ.

ಕರ್ನಾಟಕ ಗೃಹ ನಿರ್ಮಾಣ ಮಂಡಳಿಯವರು ಸದರಿ ಕಟ್ಟಡಕ್ಕೆ ಅಂದಾಜು ರೂ. 91,23,100/–ಗಳಾಗುವುದೆಂದು ತಿಳಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ದಿನಾಂಕ: 4.5.2005 / 23.7.2005 ರಲ್ಲಿ 2005–06ನೇ ಸಾಲಿನ ಆಯವ್ಯಯದಲ್ಲಿ ಇಲಾಖೆಯ ಕಟ್ಟಡಗಳಿಗಾಗಿ 2.00 ಕೋಟಿ ರೂ.ಗಳು ಮೀಸಲಿಟ್ಟಿದ್ದು ಅದರಲ್ಲಿ ಬಿಜಾಪುರ ಜಿಲ್ಲೆಯ ನೋಂದಣಿ ಕಛೇರಿ ಮತ್ತು ಉಪ ನೋಂದಣಿ ಕಛೇರಿ ಖರೀದಿಗಾಗಿ ತಗಲುವ ವೆಚ್ಚ ರೂ. 92.00 ಲಕ್ಷಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲು ಶಿಫಾರಸ್ಸು ಮಾಡಿ ಹಣ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 6.12.2005 ರಲ್ಲಿ ಬಿಜಾಪುರದ ಜಿಲ್ಲಾ ನೋಂದಣಿ ಕಛೇರಿ ಮತ್ತು ಉಪ ನೋಂದಣಿ ಕಛೇರಿಗಳ ಕಟ್ಟಡಗಳನ್ನು ಖರೀದಿಸಲು ಲೆಕ್ಕ ಶೀರ್ಷಿಕೆ 4059 ಅಡಿಯಲ್ಲಿ ರೂ. 2.00 ಕೋಟಿಗಳನ್ನು ಮೀಸಲಿರಿಸಿರುವುದರಿಂದ ಹಾಗೂ ಕರ್ನಾಟಕ ಗೃಹ ಮಂಡಳಿಯವರು ಕಛೇರಿಗಳಿಗಾಗಿಯೇ ನಿರ್ಮಿಸಿದ ಸಂಕೀರ್ಣದಲ್ಲಿ ಕಟ್ಟಡಗಳನ್ನು ಖರೀದಿಸಲು ತಗಲುವ ವೆಚ್ಚ ರೂ. 92.00 ಲಕ್ಷಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶಿಸಲಾಗಿದೆ.

ಮೇಲೆ (4) ರಲ್ಲಿ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ದಿನಾಂಕ: 26.12.2005 ನೋಂದಣಿ ಕಛೇರಿಗಳಿಗಾಗಿ ರೂ. 2.00 ಕೋಟಿ ಅನುದಾನ ಲಭ್ಯವಿದ್ದು ಅದರಲ್ಲಿ ರೂ.92.00 ಲಕ್ಷ ಸದರಿ ಕಟ್ಟಡಗಳ ಖರೀದಿಗೆ ಬಿಡುಗಡೆ ಮಾಡಿ ಆದೇಶ ಹೊರಡಿಸುವಂತೆ ಹಾಗೂ ಸದರಿ ಆದೇಶದ ನಂತರ ಎನ್.ಎಂ.ಸಿ. ಯಲ್ಲಿ ಲೋಡ್ ಮಾಡಲು ಸಹ ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ ಸರ್ಕಾರದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 487 ಇಎಸ್‌ಎಂ 2005, ಬೆಂಗಳೂರು, ದಿನಾಂಕ: 4ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಿಜಾಪುರದ ಜಿಲ್ಲಾ ನೋಂದಣಿ ಕಛೇರಿ ಮತ್ತು ಉಪ ನೋಂದಣಿ ಕಛೇರಿಗಳ ಕಟ್ಟಡಗಳನ್ನು ಖರೀದಿಸಲು ಲೆಕ್ಕ ಶೀರ್ಷಿಕೆ 4059–80–051–0–30–386 ಅಡಿಯಲ್ಲಿ ರೂ. 2.00 ಕೋಟಿಗಳನ್ನು ಒದಗಿಸಲಾಗಿದ್ದು ಸದರಿ ಹಣವನ್ನು ನೋಂದಣಿ ಕಛೇರಿಗಳಿಗಾಗಿ ಉಪಯೋಗಿಸಲು ಹಾಗೂ ಕರ್ನಾಟಕ ಗೃಹ ಮಂಡಳಿಯವರು ಈಗಾಗಲೇ ಕಛೇರಿಗಳಿಗಾಗಿಯೇ ನಿರ್ಮಿಸಿದ ಸಂಕೀರ್ಣದಲ್ಲಿ ಕಟ್ಟಡಗಳನ್ನು ಖರೀದಿಸಲು ತಗಲುವ ವೆಚ್ಚವಾದ ರೂ. 92.00 ಲಕ್ಷಗಳಿಗೆ (ರೂಪಾಯಿ ತೊಂಬತ್ತೆರಡು ಲಕ್ಷ ಮಾತ್ರ) ಆಡಳಿತಾತ್ಮಕ ಮಂಜೂರಾತಿ ನೀಡಿ ಬಿಡುಗಡೆ ಮಾಡಿ ಆದೇಶಿಸಿದೆ.

ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಈ ಹಣವನ್ನು ಸಾದಿಲ್ವಾರ್ ಬಿಲ್ಲುಗಳ ಮೂಲಕ ರಾಜ್ಯ ಹುಜೂರು ಖಜಾನೆಯಲ್ಲಿ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 923 Exp–7–8/05, ದಿನಾಂಕ:22.11.2005 ರನ್ವಯ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದಿಂದ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 129

**ಡಿ.ಎನ್. ಶ್ರೀಮುಖಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಮೆ: ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಗಮ, ಕಾಕತಿ ಇವರಿಗೆ ಕಾಕತಿ ಅ.ಸ.ನಂ: 98 ಮತ್ತು 99 ರಲ್ಲಿ ಒಟ್ಟು 45.00 ಹೆ. ಅರಣ್ಯ ಜಮೀನು ಮಂಜೂರಾದ ಬಗ್ಗೆ.

**ಓದಲಾಗಿದೆ:**

1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 8–4:95–ಎಫ್‌ಸಿ, ದಿನಾಂಕ: 29–2–1996
2) ಸರ್ಕಾರದ ಆದೇಶ ಸಂಖ್ಯೆ:ಎಫ್‌ಇಇ 22 ಎಫ್‌ಜಿಎಲ್ 94, ದಿನಾಂಕ: 5–3–1996
3) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: ಎ5(2)ಜಿಎಫ್‌ಎಲ್.ಸಿಆರ್.210/91–92 ದಿನಾಂಕ: 6–12–2004ರ ಪತ್ರ.

**ಪ್ರಸ್ತಾವನೆ:**

ಮೆ: ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಗಮ ನಿಯಮಿತ, ಕಾಕತಿ ಇವರಿಗೆ ಕಾಕತಿ ಗ್ರಾಮದ ಅರಣ್ಯ ಸರ್ವೆ ನಂ: 98 ಮತ್ತು 99 ರಲ್ಲಿ ಒಟ್ಟು 45.00 ಹೆ. ಅರಣ್ಯ ಭೂಮಿಯನ್ನು ಸಕ್ಕರೆ ಕಾರ್ಖಾನೆಗಾಗಿ ಕೇಂದ್ರ ಸರ್ಕಾರದ ಹಾಗೂ ರಾಜ್ಯ ಸರ್ಕಾರದ ಮೇಲೆ ಓದಲಾದ (1) ಮತ್ತು (2)ರ ಆದೇಶದಲ್ಲಿನ ಷರತ್ತಿಗೆ ಒಳಪಟ್ಟು ಸಂಸ್ಥೆಗೆ ಪ್ರಸ್ತಾವಿತ ಜಮೀನನ್ನು ಬಿಡುಗಡೆ ಮಾಡಲಾಗಿದೆ. ಸರ್ಕಾರದ ಆದೇಶ ಷರತ್ತು (2)ರ ಪ್ರಕಾರ ಉಪಯೋಗಿ ಸಂಸ್ಥೆಯು ರೂ.625.00 ರಂತೆ ಗೇಣಿ ಬಾಡಿಗೆ ಪಾವತಿಸಬೇಕಾಗಿದೆ. ತದನಂತರ ಸರ್ಕಾರದ ಇತ್ತೀಚಿನ ಆದೇಶ ಸಂಖ್ಯೆ: ಅಪಜೀ 69 ಎಫ್‌ಎಫ್‌ಎಂ 96 ದಿನಾಂಕ: 29–8–1997, 1–12–1997 ರಂತೆ ಸಂಸ್ಥೆಯವರಿಂದ ಗೇಣಿ ಬಾಡಿಗೆಯನ್ನು ವಸೂಲಿ ಮಾಡಬೇಕಾಗುತ್ತದೆ.

ಮೆ: ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಗಮ ನಿಯಮಿತ, ಕಾಕತಿ ಇವರು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ದಿನಾಂಕ: 11–6–2004 ರಲ್ಲಿ ಮನವಿ ಸಲ್ಲಿಸಿ ಸದ್ಯ ಕಾರ್ಖಾನೆಯು ಪಾವತಿಸಬೇಕಾಗಿರುವ ಗೇಣಿ ಮೊತ್ತವು

ಕಾರ್ಖಾನೆಗೆ ತುಂಬಾ ಹೊರೆಯಾಗುತ್ತಲಿದೆ. ಕಾರಣ ಸರ್ಕಾರದ ಆದೇಶ ದಿನಾಂಕ: 29-8-1997ರ ಅಂಶ 1 ರಲ್ಲಿ ನಮೂದಿಸಿದ ಗೇಣಿ ಬಾಡಿಗೆಯನ್ನು ಪಾವತಿಸದೇ ಪ್ರತಿ ಹೆಕ್ಟೇರಿಗೆ ರೂ.1000-00 ಗಳಂತೆ ಒಂದು ಬಾರಿ ಮಾತ್ರ ವಸೂಲಿ ಮಾಡಲು ಆದೇಶ ನೀಡುವಂತೆ ವಿನಂತಿಸಲಾಗಿದೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಇದು ಸಾರ್ವಜನಿಕ ಉದ್ದೇಶಿತ ಕಾರ್ಖಾನೆಯಾಗಿದ್ದು, ಸದರಿಯವರ ಕೋರಿಕೆಯನ್ನು ಪರಿಗಣಿಸಿ ಪ್ರತಿ ಹೆಕ್ಟೇರಿಗೆ ರೂ.1000-00 ಗಳಂತೆ ಒಂದು ಬಾರಿ ಮಾತ್ರ ವಸೂಲಿ ಮಾಡುವಂತೆ ಸರ್ಕಾರದ ಆದೇಶ ನೀಡುವಂತೆ ಕೋರಿರುತ್ತಾರೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 209 ಎಫ್‌ಎಲ್‌ಎಲ್ 2004, ಬೆಂಗಳೂರು, ದಿನಾಂಕ: 3ನೇ ಜನವರಿ 2006**

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಕೋರಿಕೆಯನ್ನು ಪರಿಗಣಿಸಿ ಮೆ: ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಗಮ ನಿಯಮಿತ, ಕಾಕತಿ ಕಾರ್ಖಾನೆಯು ಸಾರ್ವಜನಿಕ ಉದ್ದೇಶಕ್ಕಾಗಿ ಸ್ಥಾಪಿಸಲಾಗಿದ್ದು, ಕಾರ್ಖಾನೆಯ ಮನವಿಯನ್ನು ಕಾನೂನಿನ ರೀತ್ಯಾ ಪರಿಗಣಿಸಲು ಅವಕಾಶವಿರುತ್ತದೆ ಹಾಗೂ ಪ್ರತಿ ಹೆಕ್ಟೇರಿಗೆ ರೂ. 1000-00 ಗಳಂತೆ ಒಂದು ಬಾರಿ ಮಾತ್ರ ವಸೂಲಿ ಮಾಡುವುದು ಸಮಂಜಸವಾಗಿದ್ದು ಪ್ರತಿ ಹೆಕ್ಟೇರಿಗೆ ರೂ.1000-00 ಗಳಂತೆ ಒಂದು ಬಾರಿ ಗೇಣಿ ಬಾಡಿಗೆ ವಸೂಲಿ ಮಾಡುವಂತೆ ಆದೇಶಿಸಲಾಗಿದೆ.

ಈ ಆದೇಶವನ್ನು ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: ಎಲ್‌ಎಡಬ್ಲ್ಯು 60 ಒಪಿಎನ್ 2005 ದಿನಾಂಕ: 15-2-2005 ಮತ್ತು ಲಾ 316 ಅಭಿ 2005 ದಿನಾಂಕ: 5-11-2005ರ ಟಿಪ್ಪಣಿಗಳಲ್ಲಿ ನೀಡಲಾದ ಅಭಿಪ್ರಾಯಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಪಿ.ಆರ್. 63

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯದಿಂದ ತೆರವುಗೊಳಿಸಿದ ಜನರ ಪುನರ್ವಸತಿ ಬಗ್ಗೆ.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ದಿನಾಂಕ: 17-6-2005ರ ಪತ್ರ.

**ಪ್ರಸ್ತಾವನೆ:**

ಮಾನ್ಯ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 202/95 ರಲ್ಲಿ ಅರ್ಜಿ ಸಂಖ್ಯೆ: 276ರ ಮೇಲೆ ತನ್ನ ದಿನಾಂಕ: 30-10-2002 ರ ತೀರ್ಪಿನಲ್ಲಿ ರಾಜ್ಯ ಸರ್ಕಾರಕ್ಕೆ ತತ್ಕೊಳ ಮೀಸಲು ಅರಣ್ಯದಿಂದ ಅತಿಕ್ರಮಣವನ್ನು ತೆರವುಗೊಳಿಸಲು ತುರ್ತು ಕ್ರಮ ಕೈಗೊಳ್ಳಲು ನೀಡಿದ ಆದೇಶವನ್ನು ಪರಿಪಾಲಿಸಿದ ಹಿನ್ನೆಲೆಯಲ್ಲಿ ಸರ್ವೋಚ್ಚ ನ್ಯಾಯಾಲಯದಿಂದ ನಿಯುಕ್ತಿಗೊಳಿಸಲ್ಪಟ್ಟ ಕೇಂದ್ರ ಎಂಪವರ್ಡ್ ಸಮಿತಿಯು ಚಿಕ್ಕಮಗಳೂರು ಅರಣ್ಯ ವಿಭಾಗದ ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯಗಳಲ್ಲಿ ಹೆಚ್ಚಿನ ಪ್ರಮಾಣದಲಿ ್ಲಅತಿಕ್ರಮಣವಾಗಿರುವ ಬಗ್ಗೆ ಗಮನಿಸಿ ಈ ಬಗ್ಗೆ ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ವರದಿ ಸಲ್ಲಿಸಿತು. ಇದಕ್ಕೆ ಸಂಬಂಧಿಸಿದಂತೆ ಪ್ರಮಾಣ ಪತ್ರವನ್ನು (ಅಫಿಡವಿಟ್) ನೀಡುವಂತೆ, ರಾಜ್ಯ ಸರ್ಕಾರಕ್ಕೆ ಭಾರತದ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನಿರ್ದೇಶಿಸಿತು. ಅದರಂತೆ ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಯವರು ತತ್ಕೊಳ ಮೀಸಲು ಅರಣ್ಯ ಪ್ರದೇಶದಿಂದ ತೆರವುಗೊಳಿಸಿರುವ ಸ್ಥಿತಿಯನ್ನು ವಿವರಿಸುತ್ತಾ ಸರಗೋಡು ಮತ್ತು ಮಸ್ಕಲಿ ಅರಣ್ಯ ಪ್ರದೇಶಕ್ಕೆ ಸಂಬಂಧಿಸಿದಂತೆ ಕಾನೂನಾತ್ಮಕವಾಗಿ ತೆರವುಗೊಳಿಸುವ ಹಾಗೂ ಪುನರ್ವಸತಿ ಕಲ್ಪಿಸುವ ಕಾರ್ಯವನ್ನು ಪೂರ್ಣಗೊಳಿಸುವುದಕ್ಕೆ ಕಾಲಾವಕಾಶ ನೀಡುವಂತೆ ತಮ್ಮ ಪ್ರಮಾಣ ಪತ್ರ ಸಲ್ಲಿಸುತ್ತಾ, ವಿನಂತಿಸಿಕೊಂಡರು. ಅದರಂತೆ, ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯದಲ್ಲಿ ಅತಿಕ್ರಮಣವನ್ನು ತೆರವುಗೊಳಿಸುವುದು ಮತ್ತು ತೆರವುಗೊಳಿಸಿದ ಜನರ ಪುನರ್ವಸತಿ ಕಾರ್ಯವನ್ನು ಒಂದು ನಿಗದಿತ ಕಾಲಾವಧಿಯಲ್ಲಿ ಅಂತಿಮಗೊಳಿಸಬೇಕಾಗಿದೆ. ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯದಲ್ಲಿ ಅತಿಕ್ರಮಣವನ್ನು ತೆರವುಗೊಳಿಸುವ ಕಾರ್ಯದ ಸದ್ಯದ ಸ್ಥಿತಿಯನ್ನು ಈ ಕೆಳಗೆ ವಿವರಿಸಲಾಗಿದೆ.

i) ಸರಗೋಡು ಮೀಸಲು ಅರಣ್ಯ: ಸರ್ವೆ ಆಫ್ ಇಂಡಿಯಾವು ಸರಗೋಡು ಮೀಸಲು ಅರಣ್ಯದ ಸರ್ವೆ ಕಾರ್ಯ ಪೂರ್ಣಗೊಳಿಸಿದ್ದು ಸರಗೋಡು ಮೀಸಲು ಅರಣ್ಯದಲ್ಲಿನ ಅತಿಕ್ರಮಣದಾರರ ಪಟ್ಟಿಯನ್ನು ತಯಾರಿಸಲಾಗಿದೆ (ಸಿದ್ಧಪಡಿಸಲಾಗಿದೆ). ಈ ಪಟ್ಟಿಯ ಪ್ರಕಾರ 284 ಕುಟುಂಬಗಳು 934.09 ಎಕರೆ ಅರಣ್ಯ ಭೂಮಿಯನ್ನು ಅತಿಕ್ರಮಿಸಿದ್ದು ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿಕ್ಕಮಗಳೂರು ಇವರ ವರದಿಯನ್ವಯ 237 ಕುಟುಂಬಗಳನ್ನು ಪುನರ್ವಸತಿ ಗೊಳಿಸಬೇಕಾಗಿದೆ. ಸರ್ವೆ ನಂ: 133, ಫಲ್ಗುಣಿ ಗ್ರಾಮ ಬಣಕಲ್ ಹೋಬಳಿ ಮೂಡಗೆರೆ ತಾಲ್ಲೂಕಿನಲ್ಲಿ 35 ಎಕರೆ ಸರ್ಕಾರಿಜಮೀನನ್ನು ಸರಗೋಡು ಮೀಸಲು ಅರಣ್ಯದಿಂದ ತೆರವು ಗೊಳಿಸಿರುವ ಜನರ ಪುನರ್ವಸತಿ ಹಾಗೂ ಅವರ ಮೂಲಭೂತ ಸೌಲಭ್ಯಗಳಿಗಾಗಿ ಗುರ್ತಿಸಲಾಗಿದೆ.

ii) ಮಸ್ಕಲಿ ಮೀಸಲು ಅರಣ್ಯ: ಸರ್ವೆ ಆಫ್ ಇಂಡಿಯಾವು ತನ್ನ ಸರ್ವೆ ಕಾರ್ಯವನ್ನು ಅಕ್ಟೋಬರ್ 2005ರ ಕೊನೆಯೊಳಗೆ ಸಂಪೂರ್ಣಗೊಳಿಸಬಹುದೆಂದು ನಿರೀಕ್ಷಿಸಲಾಗಿದೆ. ಇಲ್ಲಿಯವರೆಗೆ, ಸರ್ವೆ ಆಫ್ ಇಂಡಿಯಾವು 1431.30 ಎಕರೆ ಜಮೀನನ್ನು ಅತಿಕ್ರಮಿಸಿರುವ 165 ಕುಟುಂಬಗಳನ್ನು ಗುರ್ತಿಸಿದ್ದು, ಸರ್ವೆ ಕಾರ್ಯವು ಪ್ರಗತಿಯಲ್ಲಿರುವುದರಿಂದ ಅತಿಕ್ರಮಣದಾರರ ಸಂಖ್ಯೆಯಲ್ಲಿ ಬದಲಾವಣೆಯಾಗಬಹುದು. ಚಿಕ್ಕಮಗಳೂರು ಜಿಲ್ಲೆಯ ಜಗರ ಹೋಬಳಿ ಸಿರವಾಸೆ ಗ್ರಾಮದ ಸರ್ವೆ ನಂ: 305 ಮತ್ತು 315 ರಲ್ಲಿ 27-00 ಎಕರೆ ಜಮೀನನ್ನು ಮೂಲಭೂತ ಸೌಲಭ್ಯದೊಂದಿಗೆ ಪುನರ್ವಸತಿಗೊಳಿಸಲು ಗುರ್ತಿಸಲಾಗಿದೆ.

2. ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯದಿಂದ ತೆರವುಗೊಳಿಸುವ ಅತಿಕ್ರಮಣದಾರರ ಪುನರ್ವಸತಿಗಾಗಿ ಚಿಕ್ಕಮಗಳೂರಿನ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಜಿಲ್ಲಾಧಿಕಾರಿಯವರ ಸಹಯೋಗದೊಂದಿಗೆ 2 ಯೋಜನೆಗಳನ್ನು ಸಿದ್ಧಪಡಿಸಿದ್ದಾರೆ. ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯಗಳೆರಡರಲ್ಲೂ ಅತಿಕ್ರಮಣದಾರರಿದ್ದರೂ ಕೇವಲ ಸಂಪೂರ್ಣವಾಗಿ ಸ್ಥಳಾಂತರಿಸಲ್ಪಟ್ಟ ಹಾಗೂ ಬೇರೆಲ್ಲೂ ಹೋಗುವುದಕ್ಕೆ ಸ್ಥಳವಿಲ್ಲದವರಿಗೆ ಮಾತ್ರ ಪುನರ್ವಸತಿ ಕಲ್ಪಿಸಲಾಗಿದೆ. ಅದರಂತೆ ಈ ಕೆಳಗೆ ವರ್ಗೀಕರಿಸಿರುವ 329 ಕುಟುಂಬಗಳನ್ನು

ಮಾತ್ರ ಪುನರ್ವಸತಿಗಾಗಿ ಪರಿಗಣಿಸಲಾಗಿದೆ. ಬೇರೆಕಡೆ ಮನೆಗಳನ್ನು ಅಥವಾ ಜಮೀನುಗಳನ್ನು ಹೊಂದಿರುವವರನ್ನು ಪುನರ್ವಸತಿಗೆ ಪರಿಗಣಿಸಲಾಗಿಲ್ಲ.

| ಕ್ರ. ಸಂ. | ವರ್ಗೀಕರಣ | ಕುಟುಂಬಗಳ ಸಂಖ್ಯೆ | |
|---|---|---|---|
| | | ಸರಗೋಡು | ಮಸ್ಕಲಿ |
| 1 | ಮನೆ ಮತ್ತು ಜಮೀನುಗಳೆರಡನ್ನು ಕಳೆದುಕೊಳ್ಳುವ ಕುಟುಂಬಗಳು | 212 | 42 |
| 2 | ಜಮೀನನ್ನು ಹೊಂದಿಲ್ಲದೇ ಇರುವವರು ಮತ್ತು ಮನೆ ಮಾತ್ರವನ್ನು ಕಳೆದು ಕೊಳ್ಳುವ ಕುಟುಂಬಗಳು | 12 | 42 |
| 3 | ಮನೆಯನ್ನು ಕಳೆದುಕೊಳ್ಳದೇ ಇರುವ ಹಾಗೂ ಜಮೀನನ್ನು ಕಳೆದುಕೊಳ್ಳುವ ಕುಟುಂಬಗಳು | 13 | 8 |
| | **ಒಟ್ಟು** | **237** | **92** |

3. ಪುನರ್ವಸತಿ ಪ್ಯಾಕೇಜಿನ ಮುಖ್ಯ ಲಕ್ಷಣದ ಸಂಕ್ಷಿಪ್ತ ವಿವರ ಕೆಳಕಂಡಂತಿದೆ.

ಅ) ಈ ಪುನರ್ವಸತಿಯು ನೊಂದ ಜನರಿಗೆ ಪರಿಹಾರಾತ್ಮಕ ಯೋಜನೆಯಾಗಿಲ್ಲದೆ ಇದು ಬೇರೆ ಆಸ್ತಿಯಿಲ್ಲದೆ ಮತ್ತು ಪೂರ್ಣವಾಗಿ ಸ್ಥಳಾಂತರಿಸಲ್ಪಟ್ಟ ಜನರಿಗೆ ಮಾತ್ರ ಮಾನವೀಯ ದೃಷ್ಟಿಕೋನದಿಂದ ನೀಡುವಂತಹದ್ದಾಗಿದೆ. ಯಾರು ಕಡುಬಡವರು, ವಸತಿ ರಹಿತರು ಮತ್ತು ಪುನರ್ವಸತಿ ಇಲ್ಲದೆ ಜೀವಿಸಲು ಸಾಧ್ಯವಿಲ್ಲವೋ ಅಂತವರಿಗೆ ಮಾತ್ರ ಪುನರ್ವಸತಿಗೊಳಿಸಲಾಗುವುದು.

ಆ) ಅಧಿಕ ಪ್ರದೇಶವನ್ನು ಅತಿಕ್ರಮಣ ಮಾಡಿರುವವರು ಮತ್ತು ಅದಲ್ಲದೆ ಬೇರೆ ರೀತಿಯಲ್ಲಿ ಅನುಕೂಲಸ್ಥರಾಗಿರುವವರು ಹಾಗೂ ಕೃಷಿಭೂಮಿ / ವ್ಯಾಪಾರ, ಅಥವಾ / ಮತ್ತು ವಸತಿಗೃಹಗಳನ್ನು ಬೇರೆ ಕಡೆ ಹೊಂದಿದ್ದಾರೋ ಅಂಥವರನ್ನು ಈ ಸೌಲಭ್ಯ ಪಡೆಯುವರ ಪಟ್ಟಿಯಿಂದ ತೆಗೆದುಹಾಕಲಾಗಿದೆ.

ಮನೆ ಮತ್ತು ಭೂಮಿ ಎರಡನ್ನು ಕಳೆದುಕೊಂಡವರಿಗೆ ಮತ್ತು ಭೂಮಿ ಇಲ್ಲದೆ ಇದ್ದು ಮನೆಯನ್ನು ಕಳೆದುಕೊಂಡಂತಹ ಕುಟುಂಬಗಳಿಗೆ ಪುನರ್ವಸತಿ ಪ್ಯಾಕೇಜ್ ಕೆಳಕಂಡಂತಿದೆ.

i) 4 ಗುಂಟೆ ಅಳತೆಯ ಒಂದು ವಾಸದ ನಿವೇಶನ.

ii) ರಾಜೀವ್‌ಗಾಂಧಿ ಹೌಸಿಂಗ್ ಕಾರ್ಪೊರೇಷನ್ ರವರು ರೂ. 50000/– ಗಳ ವೆಚ್ಚದಲ್ಲಿ ನಿರ್ಮಿಸುವ ಒಂದು ಮನೆ ಇದರಲ್ಲಿ ರೂ. 25,000/– ಗಳನ್ನು ರಾಜೀವ್ ಗಾಂಧಿ ಹೌಸಿಂಗ್ ಕಾರ್ಪೊರೇಷನ್ ಪಾವತಿಸುವುದು.

iii) ರಸ್ತೆ, ಒಳಚರಂಡಿ ವ್ಯವಸ್ಥೆ, ಕುಡಿಯುವ ನೀರು, ವಿದ್ಯುಚ್ಛಕ್ತಿ ಇತ್ಯಾದಿ ಮೂಲಭೂತ ವ್ಯವಸ್ಥೆಗಳಿಗೆ ಅವಕಾಶ ಮಾಡುವುದು.

iv) ಶಾಲೆ, ಉದ್ಯಾನವನ, ರುದ್ರಭೂಮಿ ಇತ್ಯಾದಿ ಸಮುದಾಯ ಸೌಲಭ್ಯಗಳು.

v) ಪ್ರತಿ ಕುಟುಂಬಕ್ಕೆ 1 ಲಕ್ಷ ರೂಗಳ ಸಾಮಾನ್ಯ ಅನುದಾನ

vi) ಪ್ರತಿ ಕುಟುಂಬಕ್ಕೆ ರೂ.5,000 ಗಳ ಸಾರಿಗೆ ಅನುದಾನ

ಮನೆಯನ್ನು ಕಳೆದುಕೊಳ್ಳದೆ ಭೂಮಿಯನ್ನು ಕಳೆದುಕೊಳ್ಳುವಂತಹ ಕುಟುಂಬಗಳಿಗೆ ಕೆಳಕಂಡಂತೆ ಪ್ಯಾಕೇಜ್ ನೀಡಲಾಗುವುದು.

i) ಪ್ರತಿ ಕುಟುಂಬಕ್ಕೆ ಒಂದು ಲಕ್ಷ ಸಾಮಾನ್ಯ ಪ್ಯಾಕೇಜ್.

ಇ) ಈ ಸೌಲಭ್ಯ ಪಡೆಯುವವರಿಗೆ ಹಣ ನೀಡುವುದಕ್ಕೆ ಬದಲಾಗಿ ರಾಜೀವ್ ಗಾಂಧಿ ಹೌಸಿಂಗ್ ಕಾರ್ಪೊರೇಷನ್ ವಸತಿ ಗೃಹಗಳನ್ನು ನಿರ್ಮಿಸುವ ಹಾಗೂ ಇನ್ನಿತರ ಮೂಲ ಸೌಲಭ್ಯಗಳನ್ನು ಒದಗಿಸುವ ಕಾರ್ಯವನ್ನು ಕೈಗೊಳ್ಳುತ್ತದೆ. ಅತಿಕ್ರಮಣವನ್ನು ತೆರವುಗೊಳಿಸುವುದು ಮತ್ತು ಫಲಾನುಭವಿಗಳಿಗೆ ಪುನರ್ವಸತಿ ವಿಸ್ತರಿಸುವ ಕಾರ್ಯವನ್ನು ಚಿಕ್ಕಮಗಳೂರಿನ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಕಂದಾಯ ಹಾಗೂ ಪೋಲೀಸ್ ಪ್ರಾಧಿಕಾರಗಳ ಸಹಕಾರದೊಂದಿಗೆ ಸಂಪೂರ್ಣಗೊಳಿಸುವ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ. ಜಿಲ್ಲಾಧಿಕಾರಿ, ಚಿಕ್ಕಮಗಳೂರು ಇವರ ಅಧ್ಯಕ್ಷತೆಯಲ್ಲಿ ವಿವಿಧ ಅನುಷ್ಠಾನಗೊಳಿಸುವ ಇಲಾಖೆಗಳ ಪ್ರತಿನಿಧಿಗಳನ್ನೊಳಗೊಂಡಂತೆ ರಚಿಸಲಾದ ಸಮಿತಿಯು ಈ ಯೋಜನೆಯ ಪೂರ್ಣ ಪ್ರಕ್ರಿಯೆಯು ಅಂತಿಮಗೊಳ್ಳುವ ಬಗ್ಗೆ ಮೇಲ್ವಿಚಾರಣೆ ನಡೆಸುವುದು.

ಈ) ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯ ಪ್ರದೇಶದ ಕುಟುಂಬಗಳ ಪುನರ್ವಸತಿಗಾಗಿ ಕ್ರಮವಾಗಿ ರೂ. 357.7 ಲಕ್ಷಗಳು ಹಾಗೂ ರೂ 147.2 ಲಕ್ಷಗಳು ಬೇಕಾಗುತ್ತದೆ (ಈ ಮೊತ್ತದಲ್ಲಿ ಶೇ: 5 ರಿಂದ ಶೇ: 10 ರಷ್ಟು ವ್ಯತ್ಯಾಸವಾಗಬಹುದು).

ಉ) ಭಾರತದ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಂತೆ ಈ ಪ್ರಕ್ರಿಯೆಯು ಪ್ರಾರಂಭಗೊಂಡಿರುವುದರಿಂದ, ಈ ಪ್ಯಾಕೇಜಿಗೆ ರೂ.504.9 ಲಕ್ಷಗಳ ಮೊತ್ತವು ಅವಶ್ಯವಿರುವುದು.

ಸರಗೋಡು ಮತ್ತು ಮಸ್ಕಲಿಯಿಂದ ತೆರವುಗೊಳಿಸಲಾದ ಜನರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ಕ್ರಮವಾಗಿ ರೂ.357.7 ಲಕ್ಷಗಳು ಹಾಗೂ ರೂ.147.2 ಲಕ್ಷಗಳ ಒಟ್ಟು ರೂ.504.90 ಲಕ್ಷಗಳ ಮೊತ್ತದ ಪುನರ್ವಸತಿ ಪ್ಯಾಕೇಜನ್ನು ಅನುಷ್ಠಾನಗೊಳಿಸಲು ನಿರ್ಧರಿಸಿದೆ. ಆದ್ದರಿಂದ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 56 ಎಫ್‌ಜಿಎಲ್ 2005, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಂತೆ ಚಿಕ್ಕಮಗಳೂರು ಜಿಲ್ಲೆಯಲ್ಲಿನ ಸರಗೋಡು ಮತ್ತು ಮಸ್ಕಲಿ ಮೀಸಲು ಅರಣ್ಯ ಪ್ರದೇಶದಿಂದ ತೆರವುಗೊಳಿಸಿದ ಜನರಿಗೆ ಪುನರ್ವಸತಿ ಕಲ್ಪಿಸುವ ಕುರಿತು ಈ ಕೆಳಗಿನಂತೆ 329 ಕುಟುಂಬಗಳಿಗೆ ರೂ.504.9 ಲಕ್ಷಗಳ ವೆಚ್ಚದಲ್ಲಿ (ಸರಗೋಡಿನಲ್ಲಿರುವ ಜನರಿಗೆ ಪುನರ್ವಸತಿ ಕಲ್ಪಿಸಲು ರೂ.357.7 ಲಕ್ಷಗಳು ಹಾಗೂ ಮಸ್ಕಲಿ ಜನರಿಗೆ ಪುನರ್ವಸತಿ ಕಲ್ಪಿಸಲು ರೂ.147.2 ಲಕ್ಷಗಳು) ಪುನರ್ವಸತಿ ಪ್ಯಾಕೇಜನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಿದೆ. ಅವಶ್ಯವಿರುವ ಅನುದಾನವನ್ನು ಆರ್ಥಿಕ ಇಲಾಖೆಯು ಬಿಡುಗಡೆ ಮಾಡುವುದು.

ವರ್ಗೀಕರಿಸುವ 329 ಕುಟುಂಬಗಳಿಗೆ ಪುನರ್ವಸತಿ ಪ್ಯಾಕೇಜಿನ ವಿವರಗಳು ಕೆಳಕಂಡಂತಿದೆ.

| ಕ್ರ. ಸಂ. | ವರ್ಗೀಕರಣ | ಕುಟುಂಬಗಳ ಸಂಖ್ಯೆ | |
|---|---|---|---|
| | | ಸರಗೋಡು | ಮಸ್ಕಲಿ |
| 1 | ಮನೆ ಮತ್ತು ಜಮೀನುಗಳೆರಡನ್ನು ಕಳೆದುಕೊಳ್ಳುವ ಕುಟುಂಬಗಳು | 212 | 42 |
| 2 | ಜಮೀನನ್ನು ಹೊಂದಿಲ್ಲದೇ ಇರುವವರು ಮತ್ತು ಮನೆ ಮಾತ್ರವನ್ನು ಕಳೆದುಕೊಳ್ಳುವ ಕುಟುಂಬಗಳು | 12 | 42 |
| 3 | ಮನೆಯನ್ನು ಕಳೆದುಕೊಳ್ಳದೇ ಇರುವ ಹಾಗೂ ಜಮೀನನ್ನು ಕಳೆದುಕೊಳ್ಳುವ ಕುಟುಂಬಗಳು | 13 | 8 |
| | **ಒಟ್ಟು** | **237** | **92** |

ಪುನರ್ವಸತಿ ಪ್ಯಾಕೇಜಿನ ಮುಖ್ಯ ಲಕ್ಷಣದ ಸಂಕ್ಷಿಪ್ತ ವಿವರ ಕೆಳಕಂಡಂತಿದೆ.

ಅ) ಈ ಪುನರ್ವಸತಿಯು ನೊಂದ ಜನರಿಗೆ ಪರಿಹಾರಾತ್ಮಕ ಯೋಜನೆಯಾಗಿಲ್ಲದೆ ಇದು ಬೇರೆ ಆಸ್ತಿಯಿಲ್ಲದೆ ಮತ್ತು ಪೂರ್ಣವಾಗಿ ಸ್ಥಳಾಂತರಿಸಲ್ಪಟ್ಟ ಜನರಿಗೆ ಮಾತ್ರ ಮಾನವೀಯ ದೃಷ್ಟಿಕೋನದಿಂದ ನೀಡುವಂತಹದ್ದಾಗಿದೆ. ಯಾರು ಕಡುಬಡವರು, ವಸತಿ ರಹಿತರು ಮತ್ತು ಪುನರ್ವಸತಿ ಇಲ್ಲದೆ ಜೀವಿಸಲು ಸಾಧ್ಯವಿಲ್ಲವೋ ಅಂತಹವರನ್ನು ಮಾತ್ರ ಪುನರ್ವಸತಿಗೊಳಿಸಲಾಗುವುದು.

ಆ) ಅಧಿಕ ಪ್ರದೇಶವನ್ನು ಅತಿಕ್ರಮಣ ಮಾಡಿರುವವರು ಮತ್ತು ಅದಲ್ಲದೆ ಬೇರೆ ರೀತಿಯಲ್ಲಿ ಅನುಕೂಲಸ್ಥರಾಗಿರುವವರು ಹಾಗೂ ಕೃಷಿಭೂಮಿ / ವ್ಯಾಪಾರ ಅಥವಾ / ಮತ್ತು ವಸತಿಗೃಹಗಳನ್ನು ಬೇರೆ ಕಡೆ ಹೊಂದಿದ್ದಾರೋ ಅಂಥವರನ್ನು ಈ ಸೌಲಭ್ಯ ಪಡೆಯುವರ ಪಟ್ಟಿಯಿಂದ ತೆಗೆದುಹಾಕಲಾಗಿದೆ.

ಮನೆ ಮತ್ತು ಭೂಮಿ ಎರಡನ್ನು ಕಳೆದುಕೊಂಡವರಿಗೆ ಮತ್ತು ಭೂಮಿ ಇಲ್ಲದೆ ಇದ್ದು ಮನೆಯನ್ನು ಕಳೆದುಕೊಂಡಂತಹ ಕುಟುಂಬಗಳಿಗೆ ಪುನರ್ವಸತಿ ಪ್ಯಾಕೇಜ್ ಕೆಳಕಂಡಂತಿದೆ.

i) 4 ಗುಂಟೆ ಅಳತೆಯ ಒಂದು ವಾಸದ ನಿವೇಶನ.
ii) ರಾಜೀವ್‌ಗಾಂಧಿ ಹೌಸಿಂಗ್ ಕಾರ್ಪೊರೇಷನ್ ರವರು ರೂ. 50000/–ಗಳ ವೆಚ್ಚದಲ್ಲಿ ನಿರ್ಮಿಸುವ ಒಂದು ಮನೆ ಇದರಲ್ಲಿ ರೂ. 25,000/–ಗಳನ್ನು ರಾಜೀವ್ ಗಾಂಧಿ ಹೌಸಿಂಗ್ ಕಾರ್ಪೊರೇಷನ್ ಪಾವತಿಸುವುದು.
iii) ರಸ್ತೆ, ಒಳಚರಂಡಿ ವ್ಯವಸ್ಥೆ, ಕುಡಿಯುವ ನೀರು, ವಿದ್ಯುಚ್ಛಕ್ತಿ ಇತ್ಯಾದಿ ಮೂಲಭೂತ ವ್ಯವಸ್ಥೆಗಳಿಗೆ ಅವಕಾಶ ಮಾಡುವುದು.
iv) ಶಾಲೆ, ಉದ್ಯಾನವನ, ರುದ್ರಭೂಮಿ ಇತ್ಯಾದಿ ಸಮುದಾಯ ಸೌಲಭ್ಯಗಳು.
v) ಪ್ರತಿ ಕುಟುಂಬಕ್ಕೆ 1 ಲಕ್ಷ ರೂಗಳ ಸಾಮಾನ್ಯ ಅನುದಾನ
vi) ಪ್ರತಿ ಕುಟುಂಬಕ್ಕೆ ರೂ.5,000 ಗಳ ಸಾರಿಗೆ ಅನುದಾನ

ಮನೆಯನ್ನು ಕಳೆದುಕೊಳ್ಳದೆ ಭೂಮಿಯನ್ನು ಕಳೆದುಕೊಳ್ಳುವಂತಹ ಕುಟುಂಬಗಳಿಗೆ ಕೆಳಕಂಡಂತೆ ಪ್ಯಾಕೇಜ್ ನೀಡಲಾಗುವುದು.

i) ಪ್ರತಿ ಕುಟುಂಬಕ್ಕೆ ಒಂದು ಲಕ್ಷ ಸಾಮಾನ್ಯ ಪ್ಯಾಕೇಜ್.

ಇ) ಈ ಸೌಲಭ್ಯ ಪಡೆಯುವವರಿಗೆ ಹಣ ನೀಡುವುದಕ್ಕೆ ಬದಲಾಗಿ ರಾಜೀವ್ ಗಾಂಧಿ ಹೌಸಿಂಗ್ ಕಾರ್ಪೊರೇಷನ್ ವಸತಿ ಗೃಹವನ್ನು ನಿರ್ಮಿಸುವ ಹಾಗೂ ಇನ್ನಿತರ ಮೂಲಭೂತ ಸೌಲಭ್ಯಗಳಾದ ರಸ್ತೆ, ಒಳಚರಂಡಿ ವ್ಯವಸ್ಥೆ, ಶಾಲೆ, ಉದ್ಯಾನವನ, ಕುಡಿಯುವ ನೀರಿನ ವ್ಯವಸ್ಥೆ, ವಿದ್ಯುಚ್ಛಕ್ತಿ ಇತ್ಯಾದಿ ಒದಗಿಸುವ ಕಾರ್ಯವನ್ನು ಕೈಗೊಳ್ಳುತ್ತದೆ. ಅತಿಕ್ರಮಣವನ್ನು ತೆರವುಗೊಳಿಸುವುದು ಮತ್ತು ಫಲಾನುಭವಿ ಗಳಿಗೆ ಪುನರ್ವಸತಿ ವಿಸ್ತರಿಸುವ ಕಾರ್ಯವನ್ನು ಚಿಕ್ಕಮಗಳೂರಿನ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಕಂದಾಯ ಹಾಗೂ ಪೋಲೀಸ್ ಪ್ರಾಧಿಕಾರಗಳ ಸಹಕಾರದೊಂದಿಗೆ ಸಂಪೂರ್ಣಗೊಳಿಸುವ ಜವಾಬ್ದಾರಿಯನ್ನು ನಿರ್ವಹಿಸ ಬೇಕಾಗಿದೆ. ಜಿಲ್ಲಾಧಿಕಾರಿ, ಚಿಕ್ಕಮಗಳೂರು ಇವರ ಅಧ್ಯಕ್ಷತೆಯಲ್ಲಿ ವಿವಿಧ ಅನುಷ್ಠಾನಗೊಳಿಸುವ ಇಲಾಖೆಗಳ ಪ್ರತಿನಿಧಿಗಳನ್ನೊಳಗೊಂಡಂತೆ ರಚಿಸಲಾದ ಸಮಿತಿಯು ಈ ಯೋಜನೆಯ ಪೂರ್ಣ ಪ್ರಕ್ರಿಯೆಯು ಅಂತಿಮಗೊಳ್ಳುವ ಬಗ್ಗೆ ಮೇಲ್ವಿಚಾರಣೆ ನಡೆಸುವುದು.

ಅವಶ್ಯವಿರುವ ಅನುದಾನ ಬಿಡುಗಡೆ ಮಾಡುವ ಬಗ್ಗೆ ಪ್ರತ್ಯೇಕವಾಗಿ ಆದೇಶವನ್ನು ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ವತ್ಸಲ**

ಪಿ.ಆರ್. 16 ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject:** Diversion of 1.00 ha. of forest land in Forest.Sy. No.17 of Balale Village for Water Supply Scheme to Gokarna and 7 others Villages.

**Read:** 1) Letter No.A5(2)GFI.CR.6/05-06 dated 21/10/2005 of the Principal Chief Conservator of Forests, Bangalore.

2) Letter No. F.No. 11.9/98-FC. dated:03.01.2005 of Government of India, Ministry of Environment and Forests, New Delhi.

**PREAMBLE:**

The Principal Chief Conservator of Forests, Bangalore vide his letter dated 21/10/2005 read at (1) above has submitted for diversion of 1.00 ha.of forest land in Sy.No.17 of Balale Village for water supply scheme to Gokarna and 7 other villages in favour of the Assistant Executive Engineer, IPE Sub-Division, Kumta, Honnavara subject to certain conditions:

The Government of India, Ministry of Environment and Forests, New Delhi vide their letter dated: 3-1-2005 read at (2) above conveyed its general approval under Section 2 of the Forest (Conservation) Act, 1980 for diversion of land to Government Departments for certain activities.

This proposal has been examined under the General instruction of Government of India in its letter dated: 3.1.2005 and it has been decided to accord sanction for diversion of 1.00 ha. of forest land in Ft. Sy.No. 17 of Balale Village for Water Supply Scheme to Gokarna and 7 other Villages. Hence the order.

**GOVERNMENT ORDER NO. FEE 168 FLL 2005, BANGALORE, DATED: 19th December 2005**

In the circumstances explained in the preamble and in accordance with the general approval of Government of India in the letter dated 3.1.2005, the State Government of Karnataka are pleased to accord approval under section (2) of Forest (Conservation) Act 1980 for diversion of 1.00 ha.of forest land in Sy.No.17 of Balale Village for water supply scheme to Gokarna and 7 other villages in favour of the Assistant Executive Engineer, IPE Sub-Division, Kumta, Honnavara subject to the following conditions:

1. The legal status of forest land shall continue to be forest land.
2. The land should be utilized only for the above purpose for which it is released.
3. If the land is not required for the purpose for which it is granted the same should be resumed back to the Forest Department by the Conservator of Forests under Section 82 of Karnataka Forest Act 1963.
4. The user ageny has to pay the lease rent as fixed by the Government at the time of sanction and any subsequent orders in this regard.
5. The lease is granted 20 years.
6. The Karnataka Forest Act, 1963 and Rules, 1969 will be applicable for any violation.
7. If the land is not utilized for the purpose within 2 years, the forest land shall be resumed back by the Conservator of Forests by following the provisions under section 82 of Karnataka Forest Act 1963.
8. The user agency shall pay the cost of raising compensatory afforestation over the degraded forest area at the rate prevailing at the time of sanction.
9. The user agency has to pay the Net Present Value{NPV) of forest land diverted under this proposal in accordance with Government Notification dated: 17.1.04.
10. Trees shall be felled only when it becomes necessary and under strict supervision of State Forest Department
11. The user agency shall pay the extraction charges of trees if extraction is necessary, as estimated by the Department.
12. The user agency shall ensure that there should be no damage is caused to the available wildlife in the area.
13. The project site should be outside National Parks or Wildlife Sanctuary or Protected areas.
14. The user agency shall be responsible for any damage/injury to the flora/fauna in surroundings and therefore shall take all possible measures to conserve the same.
15. The permission granted is subject to the monitoring by the concerned Regional Office of the Ministry of Environment and Forests.
16. The State Forest Department/State Government or the concerned Regional Office may impose from time to time any other conditions in the interest of conservation, protection and development of forests.
17. Any other conditions to be imposed by the Government of India/Government of Karnataka/Principal Chief Conservator of Forests, will be abided by the lessee.

By Order and in the name of the Governor of Karnataka,

**S.R. VATSALA**

P.R. 80

Under Secretary to Government

Forest,Ecology and Environment Department.

**Subject:** Diversion of 3.50 ha.of forest land for construction of 11 KV HT line from for supplying power to B.G.Kere Microwave Station of BSNL.

**Read:** 1) Principal Chief Conservator of Forests letter No. A5(5) GFL. CR.14/03-04, dated: 05.12.2003

2) State Government letter No.FEE 1 FGL 2003, dated: 2-1-2004

3) Letter No. F(C)A/11.2/274/KAR/TL,dated 28-9-2005 of Government of India, Ministry of Environment and Forests, Regional Office, (South Zone), Bangalore

**PREAMBLE:**

The Principal Chief Conservator of Forests, Bangalore vide his letter dated: 05-12-2003 read at (1) above has submitted a proposal under Section 2 of Forest (Conservation) Act 1980, for diversion 3.50 ha. of forest land Kamara Kaval Reserve Forest, Chitradurga District for construction of 11 KV HT line for supplying power to B.G. Kere Microwave Station of Bharath Sanchar Nigam Ltd.

Accordingly, the proposal was sent to Government of India for approval under section (2) of Forest (Conservation) Act 1980 vide letter dated: 2.1.2004 read at (2) above

The Government of India, Ministry of Environment and Forests, Regional Office, (South Zone), Bangalore has conveyed its approval (Stage-II) in letter dated: 28.9.2005 read at (3) above under Section 2 of Forest(Conservation)Act,1980 for diversion of 3.50 ha. of forest land Kamara Kaval Reserve Forest, Chitradurga District for construction of 11 KV HT line for supplying power to B.G. Kere Microwave Station in favour of Bharath Sanchar Nigam Ltd. with certain conditions.

The proposal has been examined in detail and hence the order.

**GOVERNMENT ORDER NO. FEE 1 FGL 2003, BANGALORE, DATED: 30th December 2005**

After careful consideration of the proposal and under the circumstances explained in the preamble Government are pleased to accord approval under section (2) of Forest (Conservation) Act 1980 for diversion of 3.50 ha. of forest land Kamara Kaval Reserve Forest, Chitradurga District for construction of 11 KV HT line for supplying power to B.G. Kere Microwave Station in favour of Bharath Sanchar Nigam Ltd. subject to the following conditions.

1. The legal status of forest land shall remain unchanged.
2. The compensatory afforestation shall be raised over 3.50 ha. of identified non-forest land in Sy.No.135 of Mullurlahalli Village, Nayakanahatti, Hobli, Callakere Taluk, Chitradurga District at the cost of the user agency. The State Government shall obtain prior permission of Central Government for change of location and schedule of compensatory afforestation site, if any.
3. The non-forest land for compensatory afforestation shall be notified as RF/PF under Indian Forest Act, 1927 or the State Forest Act within a period of 6 months and Nodal Officer(Forest Conservation) shall report the compliance within 6 months.
4. The felling of trees in forest area for the project shall be regulated in accordance with the instructions contained in Annexure V of the guidelines issued under the Act.
5. The user agency has to pay the NPV as per Government Notification dated: 17.1.2004 at Rs. 5.80 to R. 9.20 lakhs per ha. depending upon in quantity and density of the land.
6. All the funds received from the user agency under the project shall be transferred to the CAMPA. Till such time an appropriate Head of Account is communicated in this regard, such funds shall be kept in the form of fixed deposits in the name of the concerned DFO or the Nodal Officer in any Nationalized Bank as per the guidelines issued by Ministry of Environment and Forests dated 22.03.04. The State Government shall utilize all the funds other than NPV till a direction is given by the Central Government in respect of utilization of NPV of the diverted forest land.
7. This diversion of forest land shall be for a period 20 years. and the total forest area utilized for the project shall not exceed 3.50 ha. and it should be used only for the purpose for which it is granted. In case the land is not used for the stipulated purpose within one year or when it no longer needed for the stipulated purpose the area should be revert back to the forest department by the user agency. The Deputy Conservator of Forests, Chitradurga Division is authorized to take action as per section 82 of Karnataka Forest Act, 1963.
8. The lessee has to pay the lease rent as fixed by the Government from time to time.
9. Compensatory afforestation shall be raised at ;the cost of user agency over 3.50 ha. of non-forest land at the rate of prevailing at the time of approval (at present it is Rs. 54,200.00 per ha.)
10. The user agency shall abide by all the conditions imposed upon by Government of India, Government of Karnataka and Principal Chief Conservator of Forests.
11. Any violation other than the permitted conditions will be dealt under Karnataka Forest Act, Karnataka Forest Rules, Forest (Conservation) Act, 1980 and Forest (Conservation)Rules 2003.
12. Any other condition to be stipulated by the State Government/Principal Chief Conservator of Forests, Karnataka in the interest of Conservation of Forests.

By Order and in the name of the Governor of Karnataka,

**S.R. VATSALA**

Under Secretary to Government

Forest,Ecology and Environment Department.

P.R. 117

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಸಿವಿಲ್ ಸೇವೆಗಳು (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು 2000–ತೋಟಗಾರಿಕೆ ಇಲಾಖೆಯ ವಿವಿಧ ಪ್ರಾಧಿಕಾರಿಗಳನ್ನು ಗುರುತಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ:ಕೃತೋಇ 188 ತೋಸಿವಿ 87 ದಿನಾಂಕ:24–10–1987.
2) ಅಧಿಸೂಚನೆ ಸಂಖ್ಯೆ:ಡಿಪಿಎಆರ್ 2 ಎಸಿಆರ್ 93 ದಿನಾಂಕ: 22–02–1994.
3) ಅಧಿಸೂಚನೆ ಸಂಖ್ಯೆ:ಡಿಪಿಎಆರ್ 1 ಸೇರವ 96 ದಿನಾಂಕ: 28–10–1996.
4) ಸರ್ಕಾರದ ಆದೇಶ ಸಂ:ಕೃತೋಇ 155 ತೋಸಿಸೇ 97 ದಿನಾಂಕ:09–01–1998.
5) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ತೋಇ:ಆ:ಸಿ:ವಿನಿ13:28:2004–05, ದಿನಾಂಕ: 11–10–2004 ಮತ್ತು ದಿನಾಂಕ:29:30–08–2005.

**ಪ್ರಸ್ತಾವನೆ:**

ತೋಟಗಾರಿಕೆ ಇಲಾಖೆಯ ಅಧಿಕಾರಿ/ನೌಕರರ ರಹಸ್ಯ ವರದಿ ನೀಡುವ ಪ್ರಾಧಿಕಾರಿ, ಪರಿಶೀಲನಾ ಪ್ರಾಧಿಕಾರಿ ಹಾಗೂ ಅಂಗೀಕರಿಸುವ ಪ್ರಾಧಿಕಾರಿಗಳನ್ನು ನಿಗದಿಪಡಿಸಿ ಕರ್ನಾಟಕ ಸಿವಿಲ್ ಸೇವೆಗಳು (ರಹಸ್ಯ ವರದಿಗಳು) ನಿಯಮಗಳು, 1985ರ ನಿಯಮ 11ರ ಪ್ರಕಾರ ಆದೇಶವನ್ನು ಹೊರಡಿಸಲಾಗಿದೆ. ಕರ್ನಾಟಕ ಸಿವಿಲ್ ಸೇವೆಗಳು (ಕಾರ್ಯ ನಿರ್ವಹಣಾ ವರದಿಗಳು) ನಿಯಮಗಳು,1994ನ್ನು ಸರ್ಕಾರವು ಜಾರಿಗೆ ತಂದಿದೆ. ಕ್ರಮಾಂಕ (2) ರಲ್ಲಿ ಓದಲಾಗಿರುವ ದಿನಾಂಕ:28–10–1996ರ ಅಧಿಸೂಚನೆಯ ಮೇರೆಗೆ ಕರ್ನಾಟಕ ಸಿವಿಲ್ ಸೇವೆಗಳು (ಕಾರ್ಯನಿರ್ವಹಣಾ ವರದಿಗಳು)(ತಿದ್ದುಪಡಿ) ನಿಯಮಗಳು, 1996ನ್ನು ಜಾರಿಗೆ ತಂದಿದೆ.

ಮೇಲೆ (5) ರಲ್ಲಿ ಓದಲಾದ ತೋಟಗಾರಿಕೆ ನಿರ್ದೇಶಕರವರ ದಿನಾಂಕ: 1/11–10–2004ರ ಪತ್ರದಲ್ಲಿ ದಿನಾಂಕ:01–04–2004 ರಿಂದ ಇಲಾಖೆಯ ವಿಭಾಗ ಮಟ್ಟದ ತೋಟಗಾರಿಕೆ ಜಂಟಿ ನಿರ್ದೇಶಕರ ಹುದ್ದೆಗಳು ರದ್ದಾಗಿರುತ್ತದೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಹೆಚ್‌ಡಿ 208 ಹೆಚ್‌ಇಜಿ 2004 ದಿನಾಂಕ:06–08–2004 ರಲ್ಲಿ ತೋಟಗಾರಿಕೆ ಅಪರ ನಿರ್ದೇಶಕರುಗಳಿಗೆ ಮತ್ತು ತೋಟಗಾರಿಕೆ ಜಂಟಿ ನಿರ್ದೇಶಕರುಗಳಿಗೆ ಅವರ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಸೂಚಿಸಿ ಮರು ಹಂಚಿಕೆಗೆ ಆದೇಶಿಸಲಾಗಿರುತ್ತದೆ. ಈ ತರಹದ ಮಾರ್ಪಾಡದ ಸನ್ನಿವೇಶದಲ್ಲಿ ಇಲಾಖೆಯ ಅಧಿಕಾರಿ/ನೌಕರರ ಕಾರ್ಯನಿರ್ವಹಣಾ ವರದಿಗಳನ್ನು ನಿರ್ವಹಿಸಲು ಮಾರ್ಗಸೂಚಿಗಳನ್ನು ಪರಿಷ್ಕರಿಸಲು ಆದೇಶವನ್ನು ಹೊರಡಿಸಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ (6)ರ ಪ್ರಸ್ತಾವನೆಯಲ್ಲಿ ವರದಿ ನೀಡುವ ಪ್ರಾಧಿಕಾರ, ಪರಿಶೀಲನಾ ಪ್ರಾಧಿಕಾರ, ಅಂಗೀಕರಿಸುವ ಪ್ರಾಧಿಕಾರ ಮತ್ತು ಕಾರ್ಯನಿರ್ವಹಣಾ ವರದಿಗಳ ಸಂರಕ್ಷಿಸುವ ಹಾಗೂ ಪ್ರತಿಕೂಲ ಷರಾಗಳನ್ನು ಗಮನಿಸುವ ಪ್ರಾಧಿಕಾರಗಳನ್ನು ಗುರುತಿಸಲು ಅನುವಾಗುವಂತೆ, ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂ:ಕೃತೋಇ 338 ತೋಸೇಪ 2004, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2005**

ಕರ್ನಾಟಕ ಸಿವಿಲ್ ಸೇವೆಗಳು (ಕಾರ್ಯನಿರ್ವಹಣಾ ವರದಿಗಳು)(ತಿದ್ದುಪಡಿ) ನಿಯಮಗಳು, 1996 ಹಾಗೂ ಕರ್ನಾಟಕ ಸಿವಿಲ್ ಸೇವೆಗಳು (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು, 2000ರ ನಿಯಮಗಳನ್ವಯ ಸರ್ಕಾರವು ತೋಟಗಾರಿಕೆ ಇಲಾಖೆಯ ಅಧಿಕಾರಿ/ನೌಕರರುಗಳ ಕಾರ್ಯನಿರ್ವಹಣಾ ವರದಿಗಳನ್ನು ವರದಿ ಮಾಡುವ ಪ್ರಾಧಿಕಾರ, ಪರಿಶೀಲನಾ ಪ್ರಾಧಿಕಾರ ಮತ್ತು ಅಂಗೀಕರಿಸುವ ಪ್ರಾಧಿಕಾರಗಳನ್ನು ಈ ಆದೇಶಕ್ಕೆ ಅನುಬಂಧಿಸುವ ನಮೂನೆ ಪ್ರಪತ್ರದಲ್ಲಿ ನಿಗದಿಪಡಿಸಲಾಗಿದೆ.

2) ತೋಟಗಾರಿಕೆ ಇಲಾಖೆಯ ಅಧಿಕಾರಿ/ನೌಕರರುಗಳ ಕಾರ್ಯನಿರ್ವಹಣಾ ವರದಿಗಳನ್ನು ಸಂರಕ್ಷಿಸುವ ಹಾಗೂ ಪ್ರತಿಕೂಲ ಷರಾಗಳನ್ನು ಗಮನಿಸಿ ಸದರಿ ನಿಯಮಗಳನ್ವಯ ಕ್ರಮ ತೆಗೆದುಕೊಳ್ಳುವ ಪ್ರಾಧಿಕಾರಿಗಳ ಪದನಾಮಗಳನ್ನು ಸದರಿ ಪ್ರಪತ್ರದಲ್ಲಿ ನಮೂದಿಸಲಾಗಿದೆ. ಈ ನಿಯಮಗಳಲ್ಲಿ ಶೃತಪಡಿಸಿರುವ ಸೂಚನೆಗಳನ್ನು ಪಾಲಿಸುವುದಲ್ಲದೆ ಆಗಿಂದಾಗ್ಗೆ ಸರ್ಕಾರದಿಂದ ಈ ವಿಷಯದಲ್ಲಿ ಹೊರಡಿಸಲಾಗುವ ಸೂಚನೆಗಳನ್ನು ಸಹಾ ಪರಿಪಾಲಿಸುವಂತೆ ಈ ಮೂಲಕ ನಿರ್ದೇಶಿಸಿದೆ.

3) ಹಿಂದೆ ಹೊರಡಿಸಲಾಗಿದ್ದ ಆದೇಶ ಸಂಖ್ಯೆ: ಕೃತೋಇ 151 ತೋಸಿಸೇ 97 ದಿನಾಂಕ: 09–01–1998ನ್ನು ನಿರಸನಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಅನುಬಂಧ 1

| ಕ್ರಮ ಸಂಖ್ಯೆ | ಪದನಾಮ | ವರದಿ ಮಾಡುವ ಪ್ರಾಧಿಕಾರಿಗಳು | ಪುನರ್ ಅವಲೋಕನ ಮಾಡುವ ಪ್ರಾಧಿಕಾರಿ | ಅಂಗೀಕಾರ ಪ್ರಾಧಿಕಾರಿಗಳು | ಪ್ರತಿಕೂಲ ಷರಾವನ್ನು ತಿಳಿಸುವ ಪ್ರಾಧಿಕಾರ | ಪ್ರತಿಕೂಲ ಷರಾದ ಬಗ್ಗೆ ಮೇಲ್ಮನವಿ ಸಲ್ಲಿಸಬೇಕಾದ ಪ್ರಾಧಿಕಾರ | ರಹಸ್ಯ ವರದಿಯ ಅಭಿರಕ್ಷಕ ಪ್ರಾಧಿಕಾರ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ತೋಟಗಾರಿಕೆ ನಿರ್ದೇಶಕರು | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಮುಖ್ಯ ಕಾರ್ಯದರ್ಶಿಗಳು | ಮಾನ್ಯ ಮುಖ್ಯಮಂತ್ರಿಗಳು | ಮುಖ್ಯ ಕಾರ್ಯದರ್ಶಿಗಳು | ಮುಖ್ಯ ಕಾರ್ಯದರ್ಶಿಗಳು | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. |
| 2 | ತೋಟಗಾರಿಕೆ ಅಪರ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಮಾನ್ಯ ತೋಟಗಾರಿಕೆ ಸಚಿವರು | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ. |
| 3 | ತೋಟಗಾರಿಕೆ ಜಂಟಿ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಮಾನ್ಯ ತೋಟಗಾರಿಕೆ ಸಚಿವರು | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ. |
| 4 | ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು (ಜಿಲ್ಲಾ ಪಂಚಾಯತ್) | ತೋಟಗಾರಿಕೆ ನಿರ್ದೇಶಕರು | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ. |
| 5 | ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್ ಹೊರತುಪಡಿಸಿ) | ಸಂಬಂಧಿಸಿದ ತೋಟಗಾರಿಕೆ ಅಪರ ನಿರ್ದೇಶಕರು, ತೋಟಗಾರಿಕೆ ಜಂಟಿ ನಿರ್ದೇಶಕರು. | ತೋಟಗಾರಿಕೆ ನಿರ್ದೇಶಕರು | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ, |
| 6 | ತೋಟಗಾರಿಕೆ ಉಪ ನಿರ್ದೇಶಕರು (ಅಂಕಿಅಂಶ) | ತೋಟಗಾರಿಕೆ ಜಂಟಿ ನಿರ್ದೇಶಕರು (ಯೋಜನೆ) | ತೋಟಗಾರಿಕೆ ನಿರ್ದೇಶಕರು | ಸಾಂಖ್ಯಿಕ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ಇಲಾಖೆ ಮುಖ್ಯಸ್ಥರು, ಸಾಂಖ್ಯಿಕ ಇಲಾಖೆ |
| 7 | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಲ್ಲಾ ಪಂಚಾಯತ್) | ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) | ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು (ಜಿಲ್ಲಾ ಪಂಚಾಯತ್) | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 8 | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) | ತೋಟಗಾರಿಕೆ ಉಪ ನಿರ್ದೇಶಕರು: ತೋಟಗಾರಿಕೆ ಅಪರ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 9 | ವಿಶೇಷಾಧಿಕಾರಿಗಳು, ನಂದಿ ಗಿರಿಧಾಮ, ನಂದಿ, ಕೆ.ಆರ್.ಹಿಲ್ಸ್, ಕೆಮ್ಮಣ್ಣುಗುಂಡಿ | ತೋಟಗಾರಿಕೆ ಜಂಟಿ ನಿರ್ದೇಶಕರು (ಪಾರ್ಕ್ಸ್ ಅಂಡ್ ಗಾರ್ಡನ್ಸ್) | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 10 | ಲೆಕ್ಕಾಧಿಕಾರಿಗಳು, ತೋಟಗಾರಿಕೆ ನಿರ್ದೇಶನಾಲಯ | ತೋಟಗಾರಿಕೆ ಜಂಟಿ ನಿರ್ದೇಶಕರು (ಆಡಳಿತ) | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ಇಲಾಖೆ ಮುಖ್ಯಸ್ಥರು, ರಾಜ್ಯ ಲೆಕ್ಕಪತ್ರ ಶಾಖೆ |
| 11 | ತೋಟಗಾರಿಕೆ ನಿರ್ದೇಶಕರು ಕೇಂದ್ರ ಕಛೇರಿ ಸಹಾಯಕರು | ತೋಟಗಾರಿಕೆ ಜಂಟಿ ನಿರ್ದೇಶಕರು (ಆಡಳಿತ) | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 12 | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಭೂದೃಶ್ಯ) | ಸಂಬಂಧಿಸಿದ ಜಂಟಿ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು ಲೋಕೋಪಯೋಗಿ ಇಲಾಖೆ |
| 13 | ಲೆಕ್ಕ ಪರಿಶೋಧನೆ ಅಧಿಕಾರಿ | ಲೆಕ್ಕಾಧಿಕಾರಿಗಳು | ತೋಟಗಾರಿಕೆ ಜಂಟಿ ನಿರ್ದೇಶಕರು (ಆಡಳಿತ) | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ಇಲಾಖೆ ಮುಖ್ಯಸ್ಥರು, ರಾಜ್ಯ ಲೆಕ್ಕಪತ್ರ ಇಲಾಖೆ |
| 14 | ಸಹಾಯಕ ತೋಟಗಾರಿಕೆ ನಿರ್ದೇಶಕರು (ಅಂಕಿಅಂಶಗಳು) | ತೋಟಗಾರಿಕೆ ಉಪ ನಿರ್ದೇಶಕರು (ಅಂಕಿ ಅಂಶಗಳು) | ತೋಟಗಾರಿಕೆ ಜಂಟಿ ನಿರ್ದೇಶಕರು (ಯೋಜನೆ) | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ಇಲಾಖೆ ಮುಖ್ಯಸ್ಥರು, ಸಾಂಖ್ಯಿಕ ಇಲಾಖೆ. |
| 15 | ಸಹಾಯಕ ತೋಟಗಾರಿಕೆ ನಿರ್ದೇಶಕರು (ಭೂದೃಶ್ಯ) | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ಜಂಟಿ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 16 | ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) | ತೋಟಗಾರಿಕೆ ಜಂಟಿ ನಿರ್ದೇಶಕರು : ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) | ತೋಟಗಾರಿಕೆ ಉಪ ನಿರ್ದೇಶಕರು : ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 17 | ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಲ್ಲಾ ಪಂಚಾಯತ್) | ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) | ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 18 | ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಲಾನಯನ ಅಭಿವೃದ್ಧಿ ಇಲಾಖೆ) | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ | ಆಯುಕ್ತರು ಜಲಾನಯನ ಅಭಿವೃದ್ಧಿ ಇಲಾಖೆ | ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ | ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ | ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ | ತೋಟಗಾರಿಕೆ ನಿರ್ದೇಶಕರು |
| 19 | ಪತ್ರಾಂಕಿತ ವ್ಯವಸ್ಥಾಪಕರು | ತೋಟಗಾರಿಕೆ ಜಂಟಿ ನಿರ್ದೇಶಕರು (ಆಡಳಿತ) | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 20 | ಸಹಾಯಕ ತೋಟಗಾರಿಕೆ ಅಧಿಕಾರಿ (ಜಿಲ್ಲಾ ಪಂಚಾಯತ್) | ಸಹಾಯಕ ತೋಟಗಾರಿಕೆ ನಿರ್ದೇಶಕರು : ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು : ತೋಟ ಗಾರಿಕೆ ಉಪ ನಿರ್ದೇಶಕರು. | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು: ತೋಟಗಾರಿಕೆ ಉಪ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 21 | ಸಹಾಯಕ ತೋಟಗಾರಿಕೆ ಅಧಿಕಾರಿ (ರಾಜ್ಯವಲಯ) | ಸಹಾಯಕ ತೋಟಗಾರಿಕೆ ನಿರ್ದೇಶಕರು : ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು : ತೋಟಗಾರಿಕೆ ಜಂಟಿ ನಿರ್ದೇಶಕರು (ಬಟ ವಾಡೆ ಅಧಿಕಾರಿ) ವಿಶೇಷಾ ಧಿಕಾರಿಗಳು ತೋಟಗಾರಿಕೆ ಅಪರ ನಿರ್ದೇಶಕರು. | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು: ತೋಟಗಾರಿಕೆ ಉಪ ನಿರ್ದೇಶಕರು : ತೋಟಗಾರಿಕೆ ಜಂಟಿ ನಿರ್ದೇಶಕರು (ನಿಯಂತ್ರಣ ಅಧಿಕಾರಿ) : ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 22 | ಸಹಾಯಕ ತೋಟಗಾರಿಕೆ ಅಧಿಕಾರಿ (ಜಲಾನಯನ ಅಭಿವೃದ್ಧಿ ಇಲಾಖೆ) | ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಲಾನಯನ ಅಭಿವೃದ್ಧಿ ಇಲಾಖೆ) | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ | ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ | ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ | ಆಯುಕ್ತರು, ಜಲಾನಯನ ಅಭಿವೃದ್ಧಿ ಇಲಾಖೆ | ತೋಟಗಾರಿಕೆ ನಿರ್ದೇಶಕರು |
| 23 | ಲೆಕ್ಕ ಅಧೀಕ್ಷಕರು | ಲೆಕ್ಕಾಧಿಕಾರಿಗಳು | ತೋಟಗಾರಿಕೆ ಜಂಟಿ ನಿರ್ದೇಶಕರು (ಆಡಳಿತ) | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ಇಲಾಖೆ ಮುಖ್ಯಸ್ಥರು, ರಾಜ್ಯ ಲೆಕ್ಕಪತ್ರ ಇಲಾಖೆ |
| 24 | ವ್ಯವಸ್ಥಾಪಕರು : ಅಧೀಕ್ಷಕರು | ಪತ್ರಾಂಕಿತ ವ್ಯವಸ್ಥಾಪಕರು: ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು: ತೋಟಗಾರಿಕೆ ಉಪ ನಿರ್ದೇಶಕರು : ತೋಟಗಾರಿಕೆ ಜಂಟಿ ನಿರ್ದೇಶಕರು : ತೋಟ ಗಾರಿಕೆ ಅಪರ ನಿರ್ದೇಶಕರು. | ತೋಟಗಾರಿಕೆ ಜಂಟಿ ನಿರ್ದೇಶಕರು : ತೋಟಗಾರಿಕೆ ಉಪ ನಿರ್ದೇಶಕರು ಮುಖ್ಯ ಕಾರ್ಯನಿರ್ವಹಣಾ ಧಿಕಾರಿಗಳು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 25 | ಸಹಾಯಕ ಸಾಂಖ್ಯಿಕ ಅಧಿಕಾರಿ | ತೋಟಗಾರಿಕೆ ಉಪ ನಿರ್ದೇಶಕರು (ಸಾಂಖ್ಯಿಕ) | ತೋಟಗಾರಿಕೆ ಜಂಟಿ ನಿರ್ದೇಶಕರು (ಯೋಜನೆ) | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ಇಲಾಖೆ ಮುಖ್ಯಸ್ಥರು, ಸಾಂಖ್ಯಿಕ ಇಲಾಖೆ |
| 26 | ಸಹಾಯಕ ಭೂದೃಶ್ಯ ಅಧಿಕಾರಿ | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಭೂದೃಶ್ಯ) | ಸಂಬಂಧಿಸಿದ ತೋಟಗಾರಿಕೆ ಜಂಟಿ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ಇಲಾಖೆ ಮುಖ್ಯಸ್ಥರು, ಲೋಕೋಪಯೋಗಿ ಇಲಾಖೆ ತೋಟಗಾರಿಕೆ ಇಲಾಖೆ |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 27 | ಶೀಘ್ರಲಿಪಿಗಾರರು : ಪ್ರಥಮ ದರ್ಜೆ ಸಹಾಯಕರು : ದ್ವಿತೀಯ ದರ್ಜೆ ಸಹಾಯಕರು ಹಿರಿಯ ಬೆರಳಚ್ಚುಗಾರರು : ಬೆರಳಚ್ಚುಗಾರರು | ಪತ್ರಾಂಕಿತ ವ್ಯವಸ್ಥಾಪಕರು ಲೆಕ್ಕಾಧಿಕಾರಿಗಳು : ಸಹಾಯಕ ತೋಟಗಾರಿಕೆ ನಿರ್ದೇಶಕರು : ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು : ವಿಶೇಷಾಧಿ ಕಾರಿಗಳು : ತೋಟಗಾರಿಕೆ ಉಪ ನಿರ್ದೇಶಕರು : ತೋಟಗಾರಿಕೆ ಜಂಟಿ ನಿರ್ದೇಶಕರು : ತೋಟ ಗಾರಿಕೆ ಅಪರ ನಿರ್ದೇಶಕರು: ತೋಟಗಾರಿಕೆ ನಿರ್ದೇಶಕರು. | ತೋಟಗಾರಿಕೆ ಉಪ ನಿರ್ದೇಶಕರು : ತೋಟಗಾರಿಕೆ ಜಂಟಿ ನಿರ್ದೇಶಕರು : ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 28 | ಅಧೀಕ್ಷಕರು : ಪ್ರಥಮ ದರ್ಜೆ ಸಹಾಯಕರು (ಜಲಾನಯನ ಅಭಿವೃದ್ಧಿ ಇಲಾಖೆ) | ಸಹಾಯಕ ತೋಟಗಾರಿಕೆ ನಿರ್ದೇಶಕರು | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 29 | ತೋಟಗಾರಿಕೆ ಸಹಾಯಕರು (ಜಿಲ್ಲಾ ಪಂಚಾಯತ್ : ರಾಜ್ಯವಲಯ) | ಸಹಾಯಕ ತೋಟಗಾರಿಕೆ ನಿರ್ದೇಶಕರು : ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು : ತೋಟ ಗಾರಿಕೆ ಉಪ ನಿರ್ದೇಶಕರು: ವಿಶೇಷಾಧಿಕಾರಿಗಳು | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು: ತೋಟಗಾರಿಕೆ ಉಪ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 30 | ತೋಟಗಾರಿಕೆ ಸಹಾಯಕರು ಜಲಾನಯನ ಅಭಿವೃದ್ಧಿ ಇಲಾಖೆ | ಸಹಾಯಕ ತೋಟಗಾರಿಕೆ ನಿರ್ದೇಶಕರು | ಜಿಲ್ಲಾ ಜಲಾನಯನ ಅಭಿವೃದ್ಧಿ, ಅಧಿಕಾರಿ | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 31 | ರೆಫ್ರಿಜರೇಟರ್ ಸೂಪರ್ ವೈಸರ್ | ಸಂಬಂಧಿಸಿದ ಬಟವಾಡೆ ಅಧಿಕಾರಿಗಳು | ಸಂಬಂಧಿಸಿದ ಬಟವಾಡೆ ಅಧಿಕಾರಿಗಳ ಮೇಲಾಧಿಕಾರಿಗಳು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು | ತೋಟಗಾರಿಕೆ ನಿರ್ದೇಶಕರು |
| 32 | ಕಂಪ್ಯೂಟರ್ ಆಪರೇಟರ್ | | | | | | |
| 33 | ಮೆಕಾನಿಕ್ : ಮೆಕಾನಿಕ್ ಕಮ್ ಆಪರೇಟರ್, ಎಲೆಕ್ಟ್ರಿಷಿಯನ್ | | | | | | |

**ವಿ. ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 06